# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 36
2) ಸದಸ್ಯರ ಹೆಸರು : ಶ್ರೀ ರಾಜ್‌ಕುಮಾರ್ ಪಾಟೀಲ್
3) ಉತ್ತರಿಸಬೇಕಾದ ದಿನಾಂಕ : 12.02.2019
4) ಉತ್ತರಿಸುವವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಸೇಡಂ ಪಟ್ಟಣದ ಮಧ್ಯ ಭಾಗದಿಂದ ವಾಸವದತ್ತ ಸಿಮೆಂಟ್ ಕಾರ್ಖಾನೆಗೆ ರೈಲ್ವೆ ಹಳ ಹಾದು ಹೋಗಿರುವುದರಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿದೆ |
| ಆ) | ಬಂದಿದ್ದಲ್ಲಿ, ಸಾರ್ವಜನಿಕರಿಗಾಗುತ್ತಿರುವ ತೊಂದರೆಯನ್ನು ನಿವಾರಿಸಲು ಸರ್ಕಾರವು ಯಾವ ಕ್ರಮ ಕೈಗೊಂಡಿದೆ (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು)? | ಸಿವಿಲ್ ನ್ಯಾಯಾಲಯ ಸೇಡಂ ಓ.ಎಸ್ ಸಂಖ್ಯೆ 158/2012 ರಲ್ಲಿ ಸದರಿ (Railway track) ರೈಲ್ವೆ ಹಳಗಳನ್ನು ಒಂದು ವರ್ಷದೊಳಗಾಗಿ ತೆಗೆದು ಹಾಕಲು ದಿನಾಂಕ:16.12.2015 ಆದೇಶಿಸಿಲಾಗಿದೆ. ಸದರಿ ಆದೇಶದ ವಿರುದ್ಧ ಸಿವಿಲ್ ನ್ಯಾಯಾಲಯ (ಹಿ.ಶ್ರೇ) ಸೇಡಂ ರೆಗ್ಯೂಲರ್ ಅಪೀಲ್ ಸಂ 4/2016 ದಿನಾಂಕ:6.03.2017ರ ಮೂಲಕ IA. No II field by appellant U/S 151 of CPC is hereby rejected ಎಂದು ಆದೇಶಿಸಲಾಗಿದೆ. ಸದರಿ ನ್ಯಾಯಾಲಯದ ಆದೇಶಗಳ ಪ್ರಕಾರ ನಿಯಮಾನುಸಾರ ಕ್ರಮ ಕೈಗೊಳ್ಳಲಾಗುತ್ತಿದೆ. |

ಮೂಅಇ 14 ರಾರಾಹೆ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯ ಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 213
ವಿಧಾನ ಸಭೆಯ ಸದಸ್ಯರ ಹೆಸರು : ಶ್ರೀ ಎಸ್.ಎನ್. ನಾರಾಯಣಸ್ವಾಮಿ ಕೆ.ಎಂ. (ಬಂಗಾರಪೇಟೆ)
ಉತ್ತರಿಸುವವರು : ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು
ಉತ್ತರಿಸುವ ದಿನಾಂಕ : 12.02.2019

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಗಡಿ ಪ್ರದೇಶ ಮತ್ತು ಬರಪೀಡಿತ ಜಿಲ್ಲೆಯಡಿ ಕೋಲಾರ ಜಿಲ್ಲೆಯನ್ನು ಕೈಗಾರಿಕಾ ಪ್ರದೇಶವಾಗಿ ಪರಿವರ್ತಿಸುವ ಉದ್ದೇಶವು ಸರ್ಕಾರಕ್ಕೆ ಇದೆಯೇ; | ಕೋಲಾರ ಜಿಲ್ಲೆಯ ತಾಲ್ಲೂಕುಗಳನ್ನು ಅತಿ ಹಿಂದುಳಿದ ಹಾಗೂ ಹಿಂದುಳಿದ ತಾಲ್ಲೂಕುಗಳಾಗಿ ಗುರ್ತಿಸಲಾಗಿದ್ದು, ಇಲ್ಲಿ ಕೈಗಾರಿಕೆಗಳನ್ನು ಪ್ರಾರಂಭಿಸಲು ಕೈಗಾರಿಕಾ ನೀತಿ 2014-19ರಡಿ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಸರ್ಕಾರವು ಘೋಷಿಸಿರುತ್ತದೆ.<br><br>ನರಸಾಪುರ, ವೇಮಗಲ್ ಕೈಗಾರಿಕಾ ಪ್ರದೇಶಗಳನ್ನೊಳಗೊಂಡಂತೆ ಹಲವಾರು ಕೈಗಾರಿಕಾ ಪ್ರದೇಶಗಳನ್ನು ಕೆಐಎಡಿಬಿಯಿಂದ ಅಭಿವೃದ್ಧಿ ಪಡಿಸಲಾಗಿದೆ. |
| ಆ) | ಸತತವಾಗಿ ಬರಪೀಡಿತವಾಗಿರುವ ಕೋಲಾರ ಜಿಲ್ಲೆಯಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಿ ಸ್ಥಳೀಯ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು ಹಾಗೂ ಆರ್ಥಿಕವಾಗಿ ಸಶಕ್ತರನ್ನಾಗಿಸಲು ಸರ್ಕಾರ ಕ್ರಮಕೈಗೊಳ್ಳುವುದೇ; | 2014-19ರ ಕೈಗಾರಿಕಾ ನೀತಿಯ ಪ್ರಕಾರ ಕೋಲಾರ ಜಿಲ್ಲೆಯ ಅತಿ ಹಿಂದುಳಿದ ಹಾಗೂ ಹಿಂದುಳಿದ ತಾಲ್ಲೂಕುಗಳಲ್ಲಿ ಖಾಸಗಿ ಬಂಡವಾಳ ಹೂಡಿಕೆದಾರರಿಗೆ ಈ ಕೆಳಕಂಡ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ನೀಡಲಾಗುತ್ತಿದೆ.<br>1. ಬಂಡವಾಳ ಹೂಡಿಕೆ ಸಹಾಯಧನ.<br>2. ಮುದ್ರಾಂಕ ಶುಲ್ಕ ವಿನಾಯಿತಿ ಹಾಗೂ ನೋಂದಣಿ ಶುಲ್ಕದಲ್ಲಿ ಕಡಿತ.<br>3. ಭೂ- ಪರಿವರ್ತನಾ ಶುಲ್ಕದ ಮರುಪಾವತಿ.<br>4. ಪ್ರವೇಶ ತೆರಿಗೆ ವಿನಾಯಿತಿ.<br>5. ತ್ಯಾಜ್ಯ ಸಂಸ್ಕರಣಾ ಘಟಕಗಳನ್ನು ಸ್ಥಾಪಿಸಲು ಸಹಾಯಧನ.<br>6. ಆ್ಯಂಕರ್ ಘಟಕಗಳಿಗೆ ಸಹಾಯಧನ.<br>7. ನಿವ್ವಳ ವ್ಯಾಟ್ ಮತ್ತು ಸಿಎಸ್‌ಟಿ ಮರುಪಾವತಿ ಸೌಲಭ್ಯಗಳು.<br><br>ಈ ಪ್ರದೇಶದಲ್ಲಿ ಕೈಗಾರಿಕೆಗಳನ್ನು ಪ್ರಾರಂಭಿಸಿ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಪಡೆಯಲು ಇಚ್ಛಿಸುವಂತಹ ಕೈಗಾರಿಕೆಗಳು ಸ್ಥಳೀಯರಿಗೆ ಡಿ ವರ್ಗದಲ್ಲಿ ಶೇ.100% ರಷ್ಟು, ಒಟ್ಟಾರೆ ಸ್ಥಳೀಯರಿಗೆ ಶೇ.70%ರಷ್ಟು ಉದ್ಯೋಗ ನೀಡಬೇಕಾಗಿರುತ್ತದೆ.<br><br>ಇದರಿಂದ ಸ್ಥಳೀಯ ನಿರುದ್ಯೋಗಿಗಳಿಗೆ ಅವಕಾಶ ದೊರಕಿದಂತಾಗುತ್ತದೆ. |
| ಇ) | ಬೆಂಗಳೂರು, ತುಮಕೂರು, ರಾಮನಗರ ಹೊರತುಪಡಿಸಿ ಬೇರೆ ಬೇರೆ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ ಸ್ಥಾಪಿಸಲಾದ ಬೃಹತ್ ಕೈಗಾರಿಕೆಗಳು ಯಾವುವು?(ವಿವರಗಳನ್ನು ನೀಡುವುದು) | ಬೆಂಗಳೂರು, ತುಮಕೂರು, ರಾಮನಗರ ಹೊರತುಪಡಿಸಿ ಬೇರೆ ಬೇರೆ ಜಿಲ್ಲೆಗಳಲ್ಲಿ ಕಳೆದ ಮೂರು ವರ್ಷಗಳಲ್ಲಿ 62 ಬೃಹತ್ ಕೈಗಾರಿಕೆಗಳು ಸ್ಥಾಪಿಸಲಾಗಿದ್ದು, ಇವುಗಳಿಂದ ರೂ.23,099.45 ಕೋಟಿ ಬಂಡವಾಳ ಹೂಡಿಕೆಯಾಗಿದ್ದು, 17590 ಜನರಿಗೆ ಉದ್ಯೋಗ ದೊರೆತಿರುತ್ತದೆ.<br><br>ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ. |



(ಕೆ.ಜೆ. ಜಾರ್ಜ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

## Annexure for LAQ 213

### Details of SLSWCC & SHLCC Approved & Implemented Projects ( 2015-16 to 2017-18)

| Sl. No. | Committee | Company_Name | Project Location | Product | District | Date of Approval | Mtg No | Investment (INR Cr) | Employment (Nos.) | Year | Short_status |
|---|---|---|---|---|---|---|---|---|---|---|---|
| 1 | SHLCC | Himatsingka Seide Limited | Hanumanthapura,Hassan,SEZ Food Processing Zone | Bed linens Drapery and Uphoistery | Hassan | 17-Jun-15 | 38 | 1325 | 2750 | 2015-16 | Implemented |
| 2 | SHLCC | HARSHA SUGARS LTD., | Savadatti Taluk, Belagavi | 5000 TCD Sugar Cane Crushing and 30 MW Co gen | Belagavi | 17-Jun-15 | 38 | 213 | 270 | 2015-16 | Implemented |
| 3 | SHLCC | ECONAISTER BEADS INDIA PVT. LTD., | Toranagallu,Sandur,Ballari | Precious Slag Ball | Ballari | 14-Sep-15 | 40 | 148.72 | 132 | 2015-16 | Implemented |
| 4 | SHLCC | JSW STEEL LTD., | Within the existing factory premises at Toranagallu Village, Sandur Taluk, Ballari District | Augmenting the existing plant with additional manufacturing facilities | Ballari | 1-Feb-16 | 43 | 15529 | 1800 | 2015-16 | Implemented |
| 5 | SLSWCC | FOURESS FOODS, GREEN VIEW APARTMENTS , MANIPAL UDUPI MAIN ROAD , LAXMINDRANAGAR, 576102, KARNATAKA, INDIA. | Sy No. 17/1&2 of Karebail, Ankola Taluk, Uttar Kannada District. | Processing, Freezing and Exporting of Marine Products | Uttara Kannada | 1-Aug-15 | 86 | 29 | 227 | 2015-16 | Implemented |
| 6 | SLSWCC | L R ALLOYS, NO.171, 1ST CROSS,3RD MAIN, AYYAPPA BLOCK, AUSTIN TOWN,, VIVEK NAGAR, 560047, KARNATAKA, INDIA. | Malur Industrial Area , Kolar District. | Lead & Lead Alloy | Kolar | 1-Aug-15 | 86 | 12.15 | 53 | 2015-16 | Implemented |
| 7 | SLSWCC | RAFTAAR LOGISTICS INDIA PRIVATE LIMITED, 1713/14/15, SAMARTH AANGAN IIB, OFF K.L. WALAWALKAR ROAD, OSHIWARA, ANDHERI (WEST), 400053, MAHARASHTR, INDIA. | Thaneerbhavi Industrial Area, Dakshina Kannada District | petrochemicals ,petroleum products | Dakshina Kannada | 1-Aug-15 | 86 | 48.93 | 150 | 2015-16 | Implemented |
| 8 | SLSWCC | RISHI FIBC SOLUTIONS PRIVATE LIMITED, YELWALA, KOORGALLY INDL AREA, MYSORE-570018, | Adakanahalli, Tandya Industrial Area, Mysore. | FLEXIBLE INTERMEDIATE BULK CONTAINER (FIBC) | Mysuru | 1-Aug-15 | 86 | 42.42 | 100 | 2015-16 | Implemented |
| 9 | SLSWCC | SURYA PANEL PVT LTD, #1, KABBINASETHUVE, KELAGOOR POST, 577101, KARNATAKA, INDIA. | Ambale Industrial Area,Chikkamagalur District. | HDF Laminated Flooring and UV Coated High Gloss MDF Board | Chikkamagaluru | 1-Aug-15 | 86 | 28.98 | 75 | 2015-16 | Implemented |
| 10 | SLSWCC | HUBLI COTTON INDUSTRIES, THIMMAPUR, SURVEY NO: 6 & 8, TQ: SHIGGAON, THIMMAPUR VILLAGE, KARNATAKA, INDIA | Sy. Nos. 6/1A, 6/2, 6/3A, 6/4 & 8/4 of Thimmapur Village, Shiggaon Taluk, Haveri District | COTTON GINNING AND PRESSING AND OIL EXTRACTION | Haveri | 1-Oct-15 | 87 | 16.58 | 50 | 2015-16 | Implemented |
| 11 | SLSWCC | KEJ MINERALS PRIVATE LIMITED, 17 RAGHAVENDRA LAYOUT OPP MEI, YESHWANTHPUR, BANGALORE, KARNATAKA, INDIA | Sy. Nos. 12, 13, 16, 17, 18, 19, 20, 24, 25, 26, 27/1A, 28, 30 of Taranagar Village, Sandur Taluk, Bellary | Iron ore fines (62[%] Fe or more), Iron ore lumps (60%] Fe or more), Iron ore lumps (below 60[%] Fe, including black iron ore containing up to 10[%] Mn) , Iron ore pellets, ron ore fines (below 62[%] Fe) | Ballari | 1-Oct-15 | 87 | 38 | 120 | 2015-16 | Implemented |
| 12 | SLSWCC | SHAHI EXPORTS PRIVATE LTD, BELLANDUR GATE, SARJAPUR ROAD, BANGALORE | Plot No. 15A in 3rd Phase, Koorgahalli Industrial Area, Mysore District | Readymade Garments | Mysuru | 1-Oct-15 | 87 | 38.5 | 2400 | 2015-16 | Implemented |

| 13 | SLSWCC | EPSILON CARBON PVT LTD.,, LTD.2ND FLOOR, 48 UPADRASHTA HOUSE, DR V B GANDHI MARG, NEAR RHYTHM HOUSE, FORT, 400023, MAHARASHTR, INDIA. | 28/A/1, 29/2, of Musinayakanahalli, Sandur Taluk, Bellary District. | Anthracene oil/Heavy Oil, Carbon Black Oil (CBO), Coal Tar Pitch (Binder Grade), Dehydrated Coal Tar, | Ballari | 12-Jan-16 | 88 | 350 | 400 | 2015-16 | Implemented |
|---|---|---|---|---|---|---|---|---|---|---|---|
| 14 | SLSWCC | SHREE DOODHAGANGA KRISHNA SAHAKARI SAKKARE KARAKHANE NIYAMIT, NANADI CHIKODI BELGAUM - 591247 | Sy. Nos. 39/12, 39/13, 39/13A, 39/14, 114/6A, 39/11, 19/3, 41/20 Soundatti Villages, Raibag Taluk and Sy.nos. 650/6, 650/7 and 650/8 of Kerur Village of Chikkodi Taluk, Belgaum District | Sugar Plant from 5500 TCD to 10,000 TCD, Co-Generation Plant from 20.7 MW to 50 MW and Distillery and Ethanol Plant from 30 KLPD to 60 KLPD | Belagavi | 12-Jan-16 | 88 | 270.36 | 100 | 2015-16 | Implemented |
| 15 | SLSWCC | CARLSBERG INDIA PRIVATE LIMITED, 5TH FLOOR, PARAS TWIN TOWERS, SEC 54, 122001, HARYANA. | Adakanahalli Industrial Area, Mysore Taluk & District. | beer | Mysuru | 12-Jan-16 | 88 | 150 | 420 | 2015-16 | Implemented |
| 16 | SLSWCC | CHENGUANG NATURAL EXTRACTS INDIA PVT LTD,, NO. 38/1, 8TH WARD, OLD HOSPITAL ROAD, GUNDLUPETE, CHAMARAJANAGAR DIST. 57111138/1, 8TH WARD GUNDLUPET | sy nos. 251,258/1, Thriyambhakapura village, Gundlupet taluk, Chamarajanagar district | Marigold pellete and extraction plant | Chamarajanagara | 12-Jan-16 | 88 | 35 | 192 | 2015-16 | Implemented |
| 17 | SLSWCC | K K RAO GREEN ENERGY PVT LTD, , CHITUGUPPA, KODAMBAL BIDAR - 585412 | sy. No. 79/6, 79/7, 79/8, 79/9, 79/10 of Kodambal village, chitaguppa, Humnabad Taluk, Bidar | solar power | Bidar | 12-Jan-16 | 88 | 20 | 0 | 2015-16 | Implemented |
| 18 | SLSWCC | PRESTIGE STEEL INDUSTRIES,, JAYANAGAR, BANGALORENO.16, 11TH MAIN, 5TH BLOCK, BANGALORE | plot no.81 & 82, 2nd Phase, Gowribidanur Industrial Area, Chikkaballapura District | Steel Bar manufacturing | Chikkaballapura | 12-Jan-16 | 88 | 16 | 60 | 2015-16 | Implemented |
| 19 | SLSWCC | INOX AIR PRODUCTS PVT LTD., , 7TH FLOOR, CEEJAY HOUSE, DR. ANNIE BESANT ROAD, WORLI, MUMBAI | Sy.no. 654/A, Narayandevarakere, Lokappanahola, Near mariyammanahalli, Hospete, Bellary District. | Gaseous Oxygen | Ballari | 22-Jan-16 | 89 | 37.34 | 25 | 2015-16 | Implemented |
| 20 | SLSWCC | HADEE FORGINGS PVT. LTD. , NO.2339, 17TH CROSS, SECTOR 1 HSR, LAYOUT, BANGALORE – 560 102 | Jakkasandra Industrial Area, Kolar District | Cold Forged and Machined Components for Automobile and Aerosapce | Kolar | 22-Jan-16 | 89 | 21.2 | 75 | 2015-16 | Implemented |
| 21 | SLSWCC | NIRANI SUGARS LTD., NO.904, 9TH FLOOR, WTC BRIGADE GATEWAY CAMPUS, BANGALORE – 560 055 | Sy. No. 166 - /166, Mudhol, Mudhol Taluk, Bagalkot District. | Cogeneration, Ethanol | Bagalkote | 22-Jan-16 | 89 | 272.27 | 70 | 2015-16 | Implemented |
| 22 | SLSWCC | TRIVENI ENGINEERING AND INDUSTRIES LTD., NO. 1, 2, 3, BELAGOLA INDUSTRIAL AREA, K R S ROAD, METAGALLI, 570016, | Belagola Industrial Area, Mysore Taluk & District. | High Speed Industrial Gears | Mysuru | 22-Jan-16 | 89 | 90 | 200 | 2015-16 | Implemented |
| 23 | SLSWCC | JSW CEMENT LTD., , JSW CENTRE, BANDRA KURLA COMPLEX, BANDRA (E), MUMBAI-400051, SANDUR TALUQ, 583275, KARNATAKA, INDIA. | Torangallu Village, SANDUR Taluk, Bellary District. | 2.4 MTPA Cement and GGBS | Ballari | 1-Feb-16 | 90 | 466.6 | 225 | 2015-16 | Implemented |
| 24 | SLSWCC | PRAKASH SPONGE IRON AND POWER PVT LTD, #32/421, 7TH B MAIN, 4TH BLOCK, JAYANAGAR, BANGALORE-11, 4TH BLOCK, JAYANAGAR, 560011, KARNATAKA, INDIA. | Sy. No. 61/1, 61/3, of Kaparahalli Challakere Taluk, Chitradurga District | 1.2 MTPA Pelletization of Iron Ore Fines | Chitradurga | 1-Feb-16 | 90 | 244 | 120 | 2015-16 | Implemented |

| | | | | | | | | | | | |
|---|---|---|---|---|---|---|---|---|---|---|---|
| 25 | SLSWCC | INDO AUTOTECH LTD., , KOLAR TALUK, PLOT NO 176P-178P, NARSAPURA INDUSTRIAL AREA, 563133, KARNATAKA, INDIA | Sy No.176P,177P,178P,179-1 - /FULL, BANGALORE, KOLAR Taluk, Kolar District. | Project expansion for manufacture of Frame Assembly & Sub Assembly | Kolar | 1-Feb-16 | 90 | 19.22 | 0 | 2015-16 | Implemented |
| 26 | SLSWCC | NIRANI SUGARS LTD. #904, 9TH FLOOR, WORLD TRADE CENTRE, BRIGADE GATEWAY CAMPUS, NEAR ORION MALL, RAJAJINAGAR, BANGALORE- 5600SS, | Kulalli Cross Road, Mudhol, Jamkhandi Taluk, Bagalkot District. | Sugar | Bagalkote | 30-Apr-16 | 91 | 113.95 | 70 | 2016-17 | Implemented |
| 27 | SLSWCC | HARITA FEHRER LIMITED BELAGONDAPALLI, KRISHNAGIRI-635114, TAMILNADU | Plot No.40 of Kadakola Industrial Area | Polyurethane based two wheeler seats for motorcycles and scooters | Mysuru | 30-Apr-16 | 91 | 40.5 | 152 | 2016-17 | Implemented |
| 28 | SLSWCC | TVS MOTOR COMPANY LTD. P.B.NO.4, HARITA ROAD, HOSUR, KRISHNAGIRI-635109 | Nanjangud Ind area, Nanjangud | Two wheelers | Mysuru | 30-Apr-16 | 91 | 310 | 200 | 2016-17 | Implemented |
| 29 | SLSWCC | THE SOUTH INDIA PAPER MILLS LTD 1205-06, PRESTIGE MERIDIAN -2, M.G.ROAD, BANGALORE-560001 | Chikkayanachatra Village, Nanjangud Taluk, Mysore Distric | CORRUGATED FIBRE BOARD AND BOXES, PAPER AND PAPER BOARDS,, POWER | Mysuru | 30-Apr-16 | 91 | 69 | 50 | 2016-17 | Implemented |
| 30 | SLSWCC | CHENGUANG NATURAL EXTRACTS INDIA PVT LTD NO. 38/1, 8TH WARD, OLD HOSPITAL ROAD, GUNDLUPETE, CHAMARAJANAGAR-571111 | Survey Number 262/1 and 262/2, change of Sy.Nos from 264/2A,2B to Sy.Nos. 264 | Marigold pellete and extraction plant | Chamarajanagara | 30-Apr-16 | 91 | 0.98 | 10 | 2016-17 | Implemented |
| 31 | SLSWCC | KIRLOSKAR FERROUS INDUSTRIES LTD. BEVINAHALLI VILLAGEP.O. HITNALTALUKA, KOPPAL - 583234 | Sy.No.194, Bevinahalli Village, Koppal Taluk and District | Machining of Iron Castings | Koppal | 27-May-16 | 92 | 179.8 | 220 | 2016-17 | Implemented |
| 32 | SLSWCC | SATTVA CFS AND LOGISTICS PVT. LTD. NEW 153 OLD 82 SANTHOME HIGH ROAD , LEVEL 4 HIGH GATE, RA PURAM, CHENNAI - 600028 | Vemgal Industrial Area, Kolar District | Container Freight Station | Kolar | 27-May-16 | 92 | 43 | 137 | 2016-17 | Implemented |
| 33 | SLSWCC | HERMES DISTILLERY PVT. LTD. YADRAV VILLAGE, RAIBAG TALUK, BELGAUM | Yadrav Village, Raibagh Taluk, Belagavi | 28 KLPD Non Molasses based & Distilling, Bottling of 10,000 cases per day and 8 MW Co- | Belagavi | 27-May-16 | 92 | 269.91 | 0 | 2016-17 | Implemented |
| 34 | SLSWCC | ATHANI FARMERS SUGAR FACTORY LTD, VISHUNAGAR VILLAGE, NAVALIHAL POST, ATHANI TALUK, BELAGAVI | Vishunagar village, Navalihal post, Athani taluk, Belagavi Dist. | 24 MW to 29.7 MW Co-gen power plant | Belagavi | 27-May-16 | 92 | 20 | 0 | 2016-17 | Implemented |
| 35 | SLSWCC | ASHOK IRON & WORKS PVT. LTD. PLOT NO.9, 10,11, MAJGAON ROAD, UDYAMBAG, BELGAVI - 590008 | Machhe Industrial Area, Machhe Village, Belgaum District. | Block Heads and Housings | Belagavi | 3-Aug-16 | 93 | 103 | 1175 | 2016-17 | Implemented |
| 36 | SLSWCC | SRI BRAHMANAND SAGAR JAGGERY INDUSTRIES, 150/6, GOKAK ROAD, VIDYA NAGAR, HARUGERI, TAL: RAIBAG DIST: BELGAUM-591220, 106/2 BIRAPPAMADDI, 591317, KARNATAKA | Sy.No. 106/2, Alagwadi village, Raibag Taluk, Belgaum District | Expansion of Jaggery and Jaggery product from 400 TCD to 1000 TCD and Co-gen from 1 MW to 3 MW Power | Belagavi | 1 Feb-16 | 90 | 21 | 212 | 2015-16 | Implemented |
| 37 | SLSWCC | ASHOK IRON & WORKS PVT. LTD. PLOT NO.9, 10,11, MAJGAON ROAD, UDYAMBAG, BELGAVI - 590008 | Navage Industrial Area, Machhe village, Belgaum District. | Machining | Belagavi | 3-Aug-16 | 93 | 74.92 | 470 | 2016-17 | Implemented |

| | | | | | | | | | | | |
|---|---|---|---|---|---|---|---|---|---|---|---|
| 38 | SLSWCC | ASHOK IRON & WORKS PVT. LTD.<br>PLOT NO.9, 10,11, MAJGAON ROAD,<br>UDYAMBAG, BELGAVI - 590008 | Machhe Industrial Area, Machhe village, Belgaum District | Cylinder Block Head Housing | Belagavi | 3-Aug-16 | 93 | 40.17 | 722 | 2016-17 | Implemented |
| 39 | SLSWCC | SAMARTH BIO TECH LTD.<br>NO.26, GREEN GARDEN, GOKUL ROAD,<br>HUBLI26, GREEN GARDEN,<br>HUBBALI – 580 030 | Ramanakoppa Village, Kundgol Taluk and Tarihal Indutrial Area, Hubli Taluk, Dharwad District). | Vermi Compost, Bio Fertilisers, Granulated Organic Manure, Secondary nutrients, Micro Nutrients, Organic Plant growth promoters, Neem based organic pesticides, Biopesticides | Dharwad | 3-Aug-16 | 93 | 15.4 | 36 | 2016-17 | Implemented |
| 40 | SLSWCC | SHAHI EXPORTS PVT. LTD.<br>SY.NO.13,14 & 15, SARJAPURA MAIN ROAD, BELANDUR GATE, BANGALORE | Nidge Industrial Area, Shimoga Taluk, Shimoga District. | Weaving and Processing | Shivamogga | 3-Aug-16 | 93 | 426.57 | 2000 | 2016-17 | Implemented |
| 41 | SLSWCC | SRIYA FARMS AND FEEDS PVT LTD.<br>80 FT ROAD, 2ND BLOCK, HBR LAYOUT,<br>BANGALORE – 43 | Jakkasandra Village, Malur Taluk, Kolar District | Hatchery | Kolar | 3-Aug-16 | 93 | 24.26 | 70 | 2016-17 | Implemented |
| 42 | SLSWCC | ZAKINL BIOTECH PVT LTD<br>BANASHANKARI,<br>1ST STAGE, BANGALORE 1652/23, 16TH MAIN, 5TH A CROSS, BANGALORE. | Thimmegowdanapalya Village Santhemaralli, Chamarajanagara Taluk, District and Kadakola Village Mysore District | Agro Herbs Processing - Distillation - Freezing - Solvent Super Critical Extraction &Formulation Space | Mysuru | 3-Aug-16 | 93 | 67.8 | 55 | 2016-17 | Implemented |
| 43 | SLSWCC | CBM ENTERPRISES<br>'Chandrashekar Mansion', Opp. KSRTC Depot, Hosur, Hubli - 580 021 | Devasamudra Village, Molakalmuru Taluk, Chitradurga District | 3 MW Solar Power Plant | Chitradurga | 27-Sep-16 | 94 | 24 | 10 | 2016-17 | Implemented |
| 44 | SLSWCC | NETALKAR POWER TRANSMISSION PLANT<br>S.No.350, Khanapur Road, Udyambag, Belgaum. | Majgaon, Belgaum Taluk & District. | Crank shaft for Tractors & Automobiles | Belagavi | 27-Sep-16 | 94 | 22.5 | 2 | 2016-17 | Implemented |
| 45 | SLSWCC | SHRI KESHAV CEMENTS AND INFRA LTD<br>Nazar Camp, Karbhar Galli,, Vadgaon, Belgaum -590005 | Naganapur Village, Mudhol Taluk, Bagalkot District | Cement 43 Grade | Bagalkote | 27-Sep-16 | 94 | 205.91 | 20 | 2016-17 | Implemented |
| 46 | SLSWCC | Chikku Energy Private Limited<br>Basavanagudi, K.R. Road,<br>Bangalore - 560004 | Devasamudra Village, Molakalmur Taluk, Chitradurga District | 3 MW grid connected Solar Photovoltaic Based Power Plant | Chitradurga | 7-Nov-16 | 95 | 24 | 10 | 2016-17 | Implemented |
| 47 | SLSWCC | Megha Engineering and Infrastructures Limited, S2 TIE,Balanagar,37, Telangana | Sy.No.84/2 of Yamanapura, Belgaum Taluk, Belgaum District | City Gas Distribution Network | Belagavi | 20-Jan-17 | 96 | 90 | 80 | 2016-17 | Implemented |
| 48 | SLSWCC | Ferns Packers<br>Plot No.133, Part-I, 90th Block,, Tarihal Industrial Area, Dharwad – 580026 | Plot No.180 in Gamanagatti Industrial Area, Dharwad District. | Wooden / Plywood Packaging Boxes & Corrugated Boxes | Dharwad | 20-Jan-17 | 96 | 16 | 40 | 2016-17 | Implemented |
| 49 | SLSWCC | Vijaykant Dairy And Food Products Ltd.<br>Mahantesh Nagarlig 159 M.M Extension Belagavi | Sy.No.236/1,238/1 of Neginhal Village, Bailhongal Taluk, Belgaum District | Milk, Ice Cream, Curd, Paneer, Flavoured Milk, Ghee | Belagavi | 20-Jan-17 | 96 | 35 | 650 | 2016-17 | Implemented |
| 50 | SLSWCC | Wardha Solar Maharastra Private Ltd.<br>Adani House, Near Mithakali<br>Six Road, Navrangpura,<br>Gujarat -380009 | Modahalli Village, Lokkanahalli Hobli, Kollegala taluk, Chamarajanagara District | 50 MW Solar PV Power Project | Chamarajanagara | 9-Feb-17 | 97 | 350 | 152 | 2016-17 | Implemented |

| | | | | | | | | | | | |
|---|---|---|---|---|---|---|---|---|---|---|---|
| 51 | SLSWCC | Wardha Solar Maharastra Private Ltd. Adani House, Near Mithakali Six Road, Navrangpura, Gujarat -380009 | Modahalli Village, Lokkanahalli Hobli, Kollegala taluk, Chamarajanagara District | 50 MW Solar PV Power Project | Chamarajanagara | 9-Feb-17 | 97 | 350 | 152 | 2016-17 | Implemented |
| 52 | SLSWCC | Swamy Sons Agencies Private Limited 2-2-647/77,G-14,Uppal, Baghamberpet, Hyderabad-500013 | Plot No.21, 22, 23 & 24 in Gamanagatti 2nd Phase Industrial Area, Dharwad District | Warehousing and Logistics | Dharwad | 20-Mar-17 | 98 | 20 | 89 | 2016-17 | Implemented |
| 53 | SLSWCC | JSW Steel Limited U 6th Floor, East Wing, Raheja Towers, M.G. Road, Bangalore – 560 001. | Sy.No.26/5, 27/1A/1 of Bannihatti Village, Sandur Tauk, Bellary | Raw Material Truck Terminal | Ballari | 20-Mar-17 | 98 | 18.5 | 3 | 2016-17 | Implemented |
| 54 | SLSWCC | NRS Enterprises #16, Doddarahalli, Hunukundapost, Bangarpet - 563114 | Plot No.74 in Adakanahalli Industrial Area, Mysore District | Warehousing | Mysuru | 20-Mar-17 | 98 | 15.5 | 25 | 2016-17 | Implemented |
| 55 | SLSWCC | M/s Aditya Birla Solar Limited Sy. No. 12/4, Bellati Village, Shirahatti Bellati, Gadag ? 400030 | Sy.Nos.58/1,64/1,57/1-1, 57/1-2,58/2,64/2, 58/3, 64/3,58/9,58/5 of Kesaragoppa Village & Sy.Nos.777/1, 777/10,777/2,777/4,777/6, 777/7, 777/8, 777/9 of Katokola Villages, Ramdurga Taluk, Belgaum District. | 20 MW Solar Power Plant | Belagavi | 20-Jun-17 | 100 | 107.87 | 18 | 2017-18 | Implemented |
| 56 | SLSWCC | M/s Aditya Birla Solar Limited Sy. No. 12/4, Bellati Village, Shirahatti Bellati, Gadag ? 400030 | Sy.Nos.21/1,12/4,22/4,22/5, 20/6,22/6, 22/7,22/8 of Bellahatti Village & Sy.Nos.79/1A, 79/1B, 79/2, 80/2, 81/2, 79/3, 80/3, 78/3, 78/4, 79/4, 80/4A, 78/5, 79/5 of Chikkasavanur Villages, Shirahatti Taluk, Gadag District | 20 MW Solar Power Plant | Gadag | 20-Jun-17 | 100 | 104.3 | 18 | 2017-18 | Implemented |
| 57 | SLSWCC | M/s Exalt Enviroklen Private Limited Exalt, Jus Trufs, 9 Jakkur Roadjakkur Bangalore ? 560 064 | Kumbarkoppa Village, Haliyal Taluk, Dandeli, Uttara Kannada District | Eco Resort | Uttara Kannada | 20-Jun-17 | 100 | 30 | 38 | 2017-18 | Implemented |
| 58 | SLSWCC | M/s Aditya Birla Solar Ltd. Sy. No. 12/4, Bellati Village, Shirahatti Bellati, Gadag ? 400030 | Sy.Nos.117,117/P1,117/P6, 117/P17, 117/P18, 117/P8, 117/P19, 117/P20, 117/P21, 117/P22, 117/P8, 117/P5, 117/P2, 175 and 176 of Punnyahalli village, Mulabagal Taluk, Kolar District | 20 MW Solar Power Plant | Kolar | 28-Jul-17 | 101 | 112.83 | 18 | 2017-18 | Implemented |
| 59 | SLSWCC | M/s Seutic Labs Pvt. Ltd. Industrial Areahumnabad Bidar ? 585330 | Humanabad Industrial Area, Bidar District | Bulk drugs Intermediates and API | Bidar | 4-Oct-17 | 103 | 15.3 | 87 | 2017-18 | Implemented |
| 60 | SLSWCC | M/s Athani Sugars Ltd. Vishnunagar, Navalihal Post, Athani Taluk, Belagavi District | Vishnuannanagar (Madhbhavi) Village, PO, Navalihal, Athani Taluk, Belgaum | Sugar Plant from 4500 TCD to 10500 TCD | Belagavi | 4-Oct-17 | 103 | 187.61 | 250 | 2017-18 | Implemented |
| 61 | SLSWCC | M/s Diamond Metal Screen Private Ltd. Plot No.26, Rs No.336/1, Majagaonudyambag Belagavi | Plot No.25, Sy.No.336/1 in Mazagao Village, Belagavi Taluk and District | Ferrous and Non Ferrous Perforated Metals | Belagavi | 30-Dec-17 | 105 | 15.53 | 35 | 2017-18 | Implemented |
| 62 | SLSWCC | M/s South India Cements Limited 6-3-668/10/66 Durganagar Colopny,punjagutta Hyderabad – 500082 | Sy.No.367 in Mulked Village, Sedam Taluk, Gulbarga District | Cement Plant capacity from 200 TPD to 600 TPD | Kalaburagi | 27-Feb-18 | 108 | 72.07 | 300 | 2017-18 | Implemented |
| | | | | | | | | **23099.45** | **17590** | | |

## ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 653 |
| 2) | ಸದಸ್ಯರ ಹೆಸರು | : | ಶ್ರೀಮತಿ. ಜ್ಯೋತಿ ಗಣೇಶ್ ಜಿ.ಬಿ. |
| 3) | ಉತ್ತರಿಸಬೇಕಾದ ದಿನಾಂಕ | : | 12.02.2019 |
| 4) | ಉತ್ತರಿಸುವವರು | : | ಮಾನ್ಯ ಮುಖ್ಯ ಮಂತ್ರಿಗಳು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ತುಮಕೂರು ನಗರ ಸೇರಿದಂತೆ ರಾಜ್ಯದ ಎಲ್ಲಾ ನಗರ ಪ್ರದೇಶಗಳಲ್ಲಿ ಹಾದು ಹೋಗುವ ರೈಲ್ವೆ ಮಾರ್ಗಗಳಿಗೆ ಮೇಲ್ಸೇತುವೆ ಮತ್ತು ಅಂಡರ್ ಪಾಸ್ ನಿರ್ಮಾಣಕ್ಕೆ ಕೇಂದ್ರ ಸರ್ಕಾರ ಕೈಗೊಂಡಿರುವ ಯೋಜನೆಗಳಿಗೆ ಪೂರಕವಾಗಿ ರಾಜ್ಯ ಸರ್ಕಾರ ಯಾವ ಕ್ರಮಗಳನ್ನು ಕೈಗೊಂಡಿದೆ: | ಕೇಂದ್ರ ಸರ್ಕಾರದೊಂದಿಗೆ 50:50 ವೆಚ್ಚ ಹಂಚಿಕೆ/ಠೇವಣಿ ಆಧಾರದ ಮೇಲೆ ಮೇಲು ಸೇತುವೆ ಮತ್ತು ಅಂಡರ್ ಪಾಸ್ ನಿರ್ಮಾಣಕ್ಕೆ ರಾಜ್ಯ ಸರ್ಕಾರದ ವತಿಯಿಂದ ಅನುದಾನವನ್ನು ಬಿಡುಗಡೆಗೊಳಿಸುತ್ತಿದೆ. ಅಲ್ಲದೆ ಯೋಜನೆಗಳಿಗೆ ಅಗತ್ಯವಿರುವ ಜಮೀನನ್ನು ಭೂಸ್ವಾಧೀನ ಪಡಿಸಿಕೊಂಡು ರೈಲ್ವೆ ಇಲಾಖೆಗೆ ಹಸ್ತಾಂತರಿಸಲಾಗುತ್ತಿದೆ. |
| ಆ) | ರಾಜ್ಯದ ಯಾವ ಯಾವ ನಗರಗಳಲ್ಲಿ ಯಾವ ಯಾವ ಅಂಡರ್ ಪಾಸ್. ಮೇಲ್ಸೇತುವೆ ಕಾಮಗಾರಿಗಳಿಗೆ ಪೂರಕವಾದ ಹಾಗೂ ಕೇಂದ್ರ ಸಹಯೋಗದ ಕಾಮಗಾರಿ ಕೈಗೊಳ್ಳಲಾಗಿದೆ: | ಅನುಬಂಧದಲ್ಲಿ ಮಾಹಿತಿ ಒದಗಿಸಲಾಗಿದೆ |
| ಇ) | ಇದರಲ್ಲಿ. ಯಾವ ಹೊಸ ಕಾಮಗಾರಿಗಳು ಅರ್ಧಕ್ಕೆ ನಿಂತಿವೆ: ಯಾವ ಯಾವ ಕಾಮಗಾರಿಗಳು ಪ್ರಗತಿಯಲ್ಲಿವೆ? (ಸಮಗ್ರ ಮಾಹಿತಿ ಒದಗಿಸುವುದು) | |

ಮೂಅಇ 16 ರಾರಾಹೆ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯ ಮಂತ್ರಿ

# ಅನುಬಂಧ

ಕೇಂದ್ರ ಹಾಗೂ ರಾಜ್ಯ ಸರ್ಕಾರದ ವತಿಯಿಂದ ವೆಚ್ಚ ಹಂಚಿಕೆ ಆಧಾರದ ಮೇಲೆ ಕೈಗೆತ್ತಿಕೊಂಡು ಪ್ರಗತಿಯಲ್ಲಿರುವ ರೈಲ್ವೆ ಮೇಲು/ಕೆಳ ಸೇತುವೆ ಯೋಜನಾ ಕಾಮಗಾರಿಗಳ ವಿವರ

| ಕ್ರಮ ಸಂಖ್ಯೆ | ಲೆವೆಲ್ ಕ್ರಾಸಿಂಗ್ ಗೇಟ್ ಸಂಖ್ಯೆ | ಸ್ಥಳ |
|---|---|---|
| 1 | 1 | Hubballi -Kusgal ( Hosapete) Section near NH - 63 |
| 2 | 3A | Chittapura, Kalaburagi |
| 3 | 7 | Bangarapete - Mariguppam division near Origham Km. 11/600-700 |
| 4 | 16 | Kengeri - Hejjala |
| 5 | 21 | Yelahanka - Rajanakunte |
| 6 | 27 | Rajanukunte - Doddaballapura |
| 7 | 32 | Doddaballapura - Oddarahalli |
| 8 | 32 | Between Beeruru - Talaguppa Km. 43 |
| 9 | 32 | Gadag- Hombal Stations @ Km.56/300-400 |
| 10 | 43 A | Bidar |
| 11 | 45 & 46 | Bidar |
| 12 | 47 | Bengaluru - Mysuru |
| 13 | 48 | Shivamogga |
| 14 | 62 & 64 | Bhagyanagar - Koppal |
| 15 | 83 B | Afzalpura Road near Gulabarga |
| 16 | Bridge No.567/1 | Construction of approach road near Mother Theresa School near new Jevargi Road, Kalaburagi. |
| 17 | 80 | Vajra Hanuman Temple at Vijayapura Town |
| 18 | 101 | Srirangapatna - Naganahalli |
| 19 | 110 | Bellari - Bellari Cantt. 204/700-800 |
| 20 | 111 | Bellari |
| 21 | 112 | Hubballi - Guntakal |
| 22 | 114 | Bellary - Sathyanarayanapet |
| 23 | 116 | Bangarapete - Maralahalli |
| 24 | 120 | Byatarayanahalli - Taykal |
| 25 | 129 | Devanagundi - Hosakote |
| 26 | 146 B | Pedal Bajaar Road near Mangalore |
| 27 | KM 326/10-327 | Davanagere - Harihara Section |
| 28 | Approch road to KM 326/10-327 D-H | Davanagere - Harihara Section |
| 29 | 385 | Londa - Meeraj |
| 30 | 388A | Hubballi - Meeraj |
| 31 | 438 | Rayabhag - Chinchili Londa - Miraj Section |
| 32 | 27 & 47 | Chinnadagudihundi and Badanagunne Mysore Chamarajanagara Section |
| 33 | Km 129/900-130/000 | Naganahalli Yard |
| 34 | 381 | Desur - Belagavi Station, Belagavi |
| 35 | 227 | Byadagi -Motebennur Byadagi Yard, Haveri |
| 36 | 102 | kuditini yard Between Hospete- Bellary station. |
| 37 | 81 | Hbrhimpura - Vijayapura stations (Gadag-Hutagi) |
| 38 | 03 Km.1/600-700 | Hassan-Sakleshpur |
| 39 | 79 | Holenarisepura -Mavinekere |
| 40 | 78 | Holenarisepura -Mavinekere |

ಪೂರ್ಣಗೊಂಡ ಕಾಮಗಾರಿಗಳ ವಿವರ

| ಕ್ರಮ ಸಂಖ್ಯೆ | ಲೆವೆಲ್ ಕ್ರಾಸಿಂಗ್ ಗೇಟ್ ಸಂಖ್ಯೆ | ಸ್ಥಳ |
|---|---|---|
| 1 | 37 & 38 | LC near Ramanagara Railway Station |
| 2 | 42 & 43 | Near Police Kalyana Mantapoa, Bidar |
| 3 | 89 | Mysuru - Arasikere |
| 4 | 95 | Pandavapura |
| 5 | 107 | Mysuru - Bengaluru (Naganahalli) |
| 6 | 198 | Chikkajajuru - Harihara |
| 7 | Chainage. 6350 | Kaduru - Saraswathipura |
| 8 | 64 | Bhagyanagar - Koppal |

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 822 |
| 2) | ಸದಸ್ಯರ ಹೆಸರು | : | ಶ್ರೀ ರಾಜೀವ್ ಪಿ. |
| 3) | ಉತ್ತರಿಸಬೇಕಾದ ದಿನಾಂಕ | : | 12.02.2019 |
| 4) | ಉತ್ತರಿಸುವವರು | : | ಮಾನ್ಯ ಮುಖ್ಯ ಮಂತ್ರಿಗಳು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಕುಡಚಿ-ಬಾಗಲಕೋಟೆ ರೈಲ್ವೆ ಯೋಜನೆ ಪ್ರಗತಿಯಲ್ಲಿದೆಯೇ: | ಸರ್ಕಾರದ ಆದೇಶ ಸಂಖ್ಯೆ:ಮೂಅಇ 46 ರಾರಾಹೆ 2010. ದಿನಾಂಕ: 25.02.2011ರಲ್ಲಿ ಅಂದಾಜು ವೆಚ್ಚ ರೂ.816.14 ಕೋಟಿಯ ಈ ಯೋಜನೆಯನ್ನು ಶೇ 50:50 ವೆಚ್ಚ ಹಂಚಿಕೆ ಆಧಾರದ ಮೇಲೆ ಹಾಗೂ ಯೋಜನೆಗೆ ಅಗತ್ಯವಿರುವ ಜಮೀನನ್ನು ರಾಜ್ಯ ಸರ್ಕಾರವು ಉಚಿತವಾಗಿ ಜಮೀನನ್ನು ನೀಡುವುದರೊಂದಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ವತಿಯಿಂದ ಕೈಗೆತ್ತಿಕೊಳ್ಳಲೂ ಆಡಳತಾತ್ಮಕ ಅನುಮೋದನೆ ನೀಡಲಾಗಿದೆ. ಈ ಯೋಜನೆಯ ಕಾಮಗಾರಿ ಪ್ರಗತಿಯಲ್ಲಿದೆ. |
| ಆ) | ಈ ರೈಲ್ವೆ ಯೋಜನೆಗೆ ಅನುಮೋದನೆ ನೀಡಿದ ದಿನಾಂಕ ಯಾವುದು: ಇಲ್ಲಿಯವರೆಗೆ ಕಾಮಗಾರಿ ಪ್ರಾರಂಭಗೊಳ್ಳದಿರಲು ಕಾರಣವೇನು: | ಸರ್ಕಾರದ ಆದೇಶ ಸಂಖ್ಯೆ:ಮೂಅಇ 46 ರಾರಾಹೆ 2010. ದಿನಾಂಕ: 25.02.2011ರಲ್ಲಿ ಈ ಯೋಜನೆಗೆ ಆಡಳತಾತ್ಮಕ ಅನುಮೋದನೆ ನೀಡಲಾಗಿದೆ.<br>ಈ ಯೋಜನೆಯ ಕಾಮಗಾರಿ ಪ್ರಗತಿಯಲ್ಲಿದೆ. |
| ಇ) | ಅಗತ್ಯವಿರುವಂತಹ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆಯೆ ಹಾಗೂ ಸಂತ್ರಸ್ಥರಿಗೆ ಪರಿಹಾರವನ್ನು ನೀಡಲಾಗಿದೆಯೇ: ನೀಡಿದ್ದರೆ ಎಷ್ಟು ಪ್ರಮಾಣದ ಪರಿಹಾರವನ್ನು ನೀಡಲಾಗಿದೆ: | ಈ ಯೋಜನೆಗೆ ಅಗತ್ಯವಿರುವ 1953 ಎಕರೆ ಜಮೀನಿನ ಪೈಕಿ ಈವರೆವಿಗೂ 814 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದೆ. ಉಳಿದ 1139 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆ ಪ್ರಗತಿಯಲ್ಲಿದೆ. ಸಂತ್ರಸ್ಥರಿಗೆ ರೂ.229.67 ಕೋಟಿ ಅನುದಾನವನ್ನು ಈಗಾಗಲೇ ಬಿಡುಗಡೆಗೊಳಿಸಲಾಗಿದೆ. |
| ಈ) | ಭೂ-ಸ್ವಾಧೀನ ಪ್ರಕ್ರಿಯೆ ನಿಧಾನಗತಿಯಲ್ಲಿ ಸಾಗುತ್ತಿರಲು ಕಾರಣವೇನು: | ಭೂಸ್ವಾಧೀನ ಪ್ರಕ್ರಿಯೆಯು ನಡೆಯುತ್ತಿದೆ. |
| ಉ) | ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುದಾನ ಎಷ್ಟು: ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಹಣ ಎಷ್ಟು: ರಾಜ್ಯ ಸರ್ಕಾರ ಬಿಡುಗಡೆ ಮಾಡಿರುವ ಹಣ ಎಷ್ಟು: | ಈ ಯೋಜನೆಯ ಅಂದಾಜು ವೆಚ್ಚ ರೂ.816.14 ಕೋಟಿಯನ್ನು ಶೇ 50:50 ವೆಚ್ಚ ಹಂಚಿಕೆ ಆಧಾರದ ಮೇಲೆ ಕೇಂದ್ರ ಹಾಗೂ ರಾಜ್ಯ ಸರ್ಕಾರದ ವತಿಯಿಂದ ಕೈಗೆತ್ತಿಕೊಳ್ಳಲಾಗಿದ್ದು. ಕೇಂದ್ರದ ಪಾಲು ರೂ.408.07 ಕೋಟಿ ಹಾಗೂ ರಾಜ್ಯದ ಪಾಲು ರೂ.408.07 ಕೋಟಿ ಆಗಿರುತ್ತದೆ.<br>ಈ ಯೋಜನೆಯ ನಿರ್ಮಾಣ ಕಾಮಗಾರಿಗಾಗಿ ರೈಲ್ವೆ ಇಲಾಖೆಯು ನೀಡಿರುವ ಮಾಹಿತಿಯನ್ವಯ ಈವರೆವಿಗೂ ರೈಲ್ವೆ ಇಲಾಖೆಯು ರೂ.201.07 ಕೋಟಿ ಹಾಗೂ ರಾಜ್ಯ ಸರ್ಕಾರವು ರೂ.141.36 ಕೋಟಿಯನ್ನು ಮತ್ತು ಭೂಸ್ವಾಧೀನಕ್ಕಾಗಿ ರಾಜ್ಯ ಸರ್ಕಾರವು ಈವರೆವಿಗೂ ರೂ.229.67 ಕೋಟಿಯನ್ನು ಬಿಡುಗಡೆಗೊಳಿಸಿದೆ. |
| ಊ) | ಈ ಕಾಮಗಾರಿಯನ್ನು ತ್ವರಿತವಾಗಿ ಪೂರೈಸಲು ಯಾವ ಕ್ರಮವನ್ನು ಕೈಗೆತ್ತಿಕೊಳ್ಳಲಾಗುವುದು? | ಈ ಕಾಮಗಾರಿಯನ್ನು ತ್ವರಿತವಾಗಿ ಪೂರ್ಣಗೊಳಿಸಲು ರಾಜ್ಯ ಸರ್ಕಾರವು ಅಗತ್ಯವಿರುವ ಜಮೀನನ್ನು ಭೂಸ್ವಾಧೀನಪಡಿಸಿಕೊಂಡು ರೈಲ್ವೆ ಇಲಾಖೆಗೆ ಹಸ್ತಾಂತರಿಸಲು ಹಾಗೂ ರೈಲ್ವೆ ಇಲಾಖೆಯ ಬೇಡಿಕೆಯಾನುಸಾರ ಅಗತ್ಯ ಅನುದಾನವನ್ನು ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳುತ್ತಿದೆ. ಈಗಾಗಲೇ ಬಾಗಲಕೋಟೆ –ಖಜ್ಜಿಡೋಣಿ ವಿಭಾಗದ 30 ಕಿ.ಮೀ ಮಾರ್ಗದ ಕಾಮಗಾರಿ ಪೂರ್ಣಗೊಂಡು ಸಂಚಾರಕ್ಕೆ ಮುಕ್ತಗೊಳಿಸಲಾಗಿದೆ. |

ಮೂಅಇ 17 ರಾರಾಹೆ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯ ಮಂತ್ರಿ

# ಕರ್ನಾಟಕ ವಿಧಾನಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 853 |
| ಸದಸ್ಯರ ಹೆಸರು | ಶ್ರೀ ಶಿವಣ್ಣ. ಬಿ. (ಆನೇಕಲ್) |
| ಉತ್ತರಿಸಬೇಕಾದ ದಿನಾಂಕ | 12-02-2019 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಆನೇಕಲ್ ತಾಲ್ಲೂಕಿಗೆ ಮಂಜೂರಾಗಿರುವ ಹಾಗೂ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಕರ ಸಂಖ್ಯೆ ಎಷ್ಟು; (ಮಾಹಿತಿ ನೀಡುವುದು) | (see table below) |
| ಆ) | ಖಾಲಿ ಇರುವ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಕರ ಹುದ್ದೆಗಳು ಎಷ್ಟು; (ಮಾಹಿತಿ ನೀಡುವುದು) | (see table below) |
| ಇ) | ಈ ತಾಲ್ಲೂಕಿನಲ್ಲಿ ಖಾಲಿ ಇರುವ ಪ್ರಾಥಮಿಕ ಹಾಗೂ ಪ್ರೌಢ ಶಾಲಾ ಶಿಕ್ಷಕರ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು? (ಪೂರ್ಣ ಮಾಹಿತಿ ನೀಡುವುದು) | **ಸರ್ಕಾರಿ ಪ್ರಾಥಮಿಕ ಶಾಲೆ :**<br>ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಂಬಂಧಪಟ್ಟಂತೆ 2018-19 ನೇ ಸಾಲಿನಲ್ಲಿ ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಗಳ ನೇಮಕಾತಿಗೆ ಪ್ರಕ್ರಿಯೆಯನ್ನು ಶೀಘ್ರದಲ್ಲಿಯೇ ಹಮ್ಮಿಕೊಳ್ಳಲಾಗುವುದು. ತಾತ್ಕಾಲಿಕವಾಗಿ ಶೈಕ್ಷಣಿಕ ಹಿತದೃಷ್ಟಿಯನ್ನು ಗಮನಿಸಿ ಅಗತ್ಯ ಖಾಲಿ ಹುದ್ದೆಗಳಲ್ಲಿ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಲಾಗಿದೆ. ಅಲ್ಲದೇ, ಮಧ್ಯಾವಧಿಯಲ್ಲಿ ನಿವೃತ್ತರಾದ ಶಿಕ್ಷಕರನ್ನು ಶೈಕ್ಷಣಿಕ ವರ್ಷಾಂತ್ಯದವರೆಗೆ ಮುಂದುವರೆಸಲಾಗಿದೆ.<br><br>**ಸರ್ಕಾರಿ ಪ್ರೌಢ ಶಾಲೆ :**<br>ಪ್ರೌಢಶಾಲೆಗಳಿಗೆ ಸಂಬಂಧಿಸಿದಂತೆ ತಾತ್ಕಾಲಿಕವಾಗಿ ಶೈಕ್ಷಣಿಕ ಹಿತದೃಷ್ಟಿಯನ್ನು ಗಮನಿಸಿ ಅಗತ್ಯ ಖಾಲಿ ಹುದ್ದೆಗಳಲ್ಲಿ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಲಾಗಿದೆ. ಅಲ್ಲದೇ, ಮಧ್ಯಾವಧಿಯಲ್ಲಿ ನಿವೃತ್ತರಾದ ಶಿಕ್ಷಕರನ್ನು ಶೈಕ್ಷಣಿಕ ವರ್ಷಾಂತ್ಯದವರೆಗೆ ಮುಂದುವರೆಸಲಾಗಿದೆ. |

Answer to ಅ) and ಆ):

| ಪ್ರಾಥಮಿಕ ಶಾಲಾ ಶಿಕ್ಷಕರ ಹುದ್ದೆಯ ವಿವರ | | | ಪ್ರೌಢ ಶಾಲಾ ಶಿಕ್ಷಕರ ಹುದ್ದೆಯ ವಿವರ | | |
|---|---|---|---|---|---|
| ಮಂಜೂರಾದ ಹುದ್ದೆಗಳು | ಹಾಲಿ ಕರ್ತವ್ಯ ನಿರ್ವಹಿಸುತ್ತಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು | ಮಂಜೂರಾದ ಹುದ್ದೆಗಳು | ಹಾಲಿ ಕರ್ತವ್ಯನಿರ್ವಹಿಸುತ್ತಿರುವ ಹುದ್ದೆಗಳು | ಖಾಲಿ ಇರುವ ಹುದ್ದೆಗಳು |
| 1011 | 798 | 213 | 124 | 107 | 17 |

ಇಡಿ 79 ಪಿಜಿಸಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 823
ಸದಸ್ಯರ ಹೆಸರು : ಶ್ರೀ. ರಾಜೀವ್.ಪಿ (ಕುಡಚಿ)
ಉತ್ತರಿಸಬೇಕಾದ ದಿನಾಂಕ : 12/02/2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕಳೆದ ಸಾಲಿನ ಆಯವ್ಯಯದಲ್ಲಿ ಸರ್ಕಾರಿ ಶಾಲೆಗಳಲ್ಲಿ ಆಂಗ್ಲ ಮಾಧ್ಯಮದಲ್ಲಿ ಎಲ್.ಕೆ.ಜಿ ಮತ್ತು ಯು.ಕೆ.ಜಿಗಳನ್ನು ಪ್ರಾರಂಭಿಸುವ ಯೋಜನೆ ಘೋಷಿಸಲಾಗಿತ್ತೆ; ಇಲ್ಲಿಯವರೆಗೆ ಎಷ್ಟು ಆಂಗ್ಲ ಮಾಧ್ಯಮ ಶಾಲೆಗಳನ್ನು ಪ್ರಾರಂಭಿಸಲಾಗಿದೆ; ಪ್ರಾರಂಭಿಸದಿದ್ದಲ್ಲಿ ಕಾರಣವೇನು; (ತಾಲ್ಲೂಕುವಾರು ವಿವರಗಳನ್ನು ಒದಗಿಸುವುದು) | ಕಳೆದ ಸಾಲಿನ ಅಯವ್ಯಯದಲ್ಲಿ ಸರ್ಕಾರಿ ಶಾಲೆಗಳಲ್ಲಿ ಆಂಗ್ಲ ಮಾಧ್ಯಮದಲ್ಲಿ ಎಲ್.ಕೆ.ಜಿ ಮತ್ತು ಯು.ಕೆ.ಜಿಗಳನ್ನು ಪ್ರಾರಂಭಿಸುವ ಯೋಜನೆ ಘೋಷಿಸಲಾಗಿರುವುದಿಲ್ಲ. 2019-20ನೇ ಸಾಲಿನಲ್ಲಿ ಪೂರ್ವ ಪ್ರಾಥಮಿಕ ತರಗತಿಗಳನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗಿದೆ. |
| ಆ. | ಆಯವ್ಯಯದಲ್ಲಿ ಮಾಡಿದ ಘೋಷಣೆ ಅದೇ ಸಾಲಿನಲ್ಲಿ ಈಡೇರದಿದ್ದರೆ ಇದರ ವಿಳಂಬಕ್ಕೆ ಯಾರು ಕಾರಣರಾಗಿರುತ್ತಾರೆ; ಅವರ ವಿರುದ್ಧ ಯಾವ ಕ್ರಮ ಜರುಗಿಸಲಾಗುವುದು? | ಅನ್ವಯಿಸುವುದಿಲ್ಲ |

ಇಡಿ 80 ಪಿಜಿಸಿ 2019

ಹೆಚ್.ಡಿ.ಕುಮಾರಸ್ವಾಮಿ
(ಮುಖ್ಯಮಂತ್ರಿ)

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 714
ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)
ಉತ್ತರಿಸಬೇಕಾದ ದಿನಾಂಕ : 12/02/2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಹಲವು ವರ್ಷಗಳ ಹಿಂದೆ ನಿರ್ಮಾಣಗೊಂಡ ಸರ್ಕಾರಿ ಶಿಕ್ಷಣ ಸಂಸ್ಥೆಗಳ (ಪ್ರಾಥಮಿಕ ಶಾಲೆ, ಪ್ರೌಢ ಶಾಲೆ, ಪದವಿ ಪೂರ್ವ ಕಟ್ಟಡ) ಅಂದಾಜು ವೆಚ್ಚದ 1/3 ಅಂಶ ಅನುದಾನವನ್ನು ಖಾಸಗಿ ವ್ಯಕ್ತಿಗಳು (ದಾನಿಗಳು) ನೀಡಿದಲ್ಲಿ, ಸದರಿ ಶಿಕ್ಷಣ ಸಂಸ್ಥೆಗಳಿಗೆ ದಾನಿಗಳ ಹೆಸರು ಇಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಯೋಜಕ 2010 ದಿನಾಂಕ: 01.02.2011ರಂತೆ<br>1) ಯಾವುದಾದರೂ ಶಿಕ್ಷಣ ಸಂಸ್ಥೆಯು ಕಟ್ಟಡದ ಒಟ್ಟು ವೆಚ್ಚದಲ್ಲಿ 1/3ನೇ ಭಾಗದಷ್ಟು ಅಥವಾ ಹೆಚ್ಚಿನ ಹಣವನ್ನು ದಾನಿಗಳು ಭರಿಸಿದಲ್ಲಿ ಸದರಿ ದಾನಿಗಳು ಕೋರುವ ಹೆಸರನ್ನು ಶಾಲೆಗೆ ಇಡಲು ಅವಕಾಶವಿದೆ.<br>2) ಇದಕ್ಕಿಂತ ಕಡಿಮೆ ಮೊತ್ತವನ್ನು ನೀಡಿದ ಪಕ್ಷದಲ್ಲಿ ಆ ಮೊತ್ತದಿಂದ ಕಟ್ಟಲ್ಪಟ್ಟ ಕೊಠಡಿ, ಒಳಾಂಗಣ ಅಥವಾ ಆ ವಿಭಾಗಕ್ಕೆ ಮಾತ್ರ ಸದರಿ ದಾನಿಗಳು ಇಚ್ಛೆಪಟ್ಟ ಹೆಸರನ್ನು ನಾಮಕರಣ ಮಾಡಲು ಅವಕಾಶವಿರುತ್ತದೆ. |
| ಆ. | ಬಂದಿದ್ದಲ್ಲಿ, ದಾನಿಗಳು ನೀಡಿದ ಅನುದಾನದಲ್ಲಿ ನಿರ್ಮಿಸಿದ ಕಟ್ಟಡ ಅಥವಾ ಯಾವುದೇ ಅಭಿವೃದ್ಧಿ ಕಾಮಗಾರಿಗಳ ವಿಭಾಗಕ್ಕೆ ಮಾತ್ರ ದಾನಿಗಳ ಹೆಸರು ಇಡುವುದು ಸೂಕ್ತವಲ್ಲವೇ; ಈ ಬಗ್ಗೆ ಸರ್ಕಾರದ ನಿಲುವೇನು? | |

ಇಡಿ 78 ಪಿಜಿಸಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

## ಕರ್ನಾಟಕ ವಿಧಾನ ಸಭೆ

1. ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 66
2. ಸದಸ್ಯರ ಹೆಸರು : ಶ್ರೀ ಉಮಾನಾಥ್ ಎ. ಕೋಟ್ಯಾನ್
3. ಉತ್ತರಿಸುವ ಸಚಿವರು : ತೋಟಗಾರಿಕೆ ಸಚಿವರು
4. ಉತ್ತರಿಸಬೇಕಾದ ದಿನಾಂಕ : 12-02-2019.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ನೀರಾ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸುವ ನಿಟ್ಟಿನಲ್ಲಿ ಸರ್ಕಾರದ ಮುಂದಿರುವ ಪ್ರಸ್ತಾವನೆಗಳೇನು; | ರಾಜ್ಯದಲ್ಲಿ ನೀರಾ ಅಭಿವೃದ್ಧಿ ಮಂಡಳಿಯನ್ನು ಸ್ಥಾಪಿಸುವ ಪ್ರಸ್ತಾವನೆಗಳು ಇರುವುದಿಲ್ಲ. |
| ಆ) | ಅಬಕಾರಿ ಕಾಯಿದೆಗೆ ತಿದ್ದುಪಡಿ ತಂದು ನೀರಾ ಅಭಿವೃದ್ಧಿ ಮಂಡಳಿ ಸ್ಥಾಪಿಸುವ ದಿಶೆಯಲ್ಲಿ ವಿಳಂಬ ನೀತಿಯ ಅನುಸರಣೆಗೆ ಕಾರಣಗಳೇನು? | ಪ್ರಶ್ನೆ ಉದ್ಭವಿಸುವುದಿಲ್ಲ. |
| ಇ) | ನೀರಾ ಉತ್ಪನ್ನಗಳ ಮೂಲಕ ಲಾಭದಾಯಕ ಉದ್ಯೋಗಗಳನ್ನು ಮಾಡಬಹುದಾಗಿದ್ದು, ತೆಂಗು ಬೆಳೆಗಾರರು ಆರ್ಥಿಕ ಬಲವನ್ನು ಹೊಂದುವ ಸಾಧ್ಯತೆಗಳು ಹೆಚ್ಚಿರುವುದರಿಂದ ಮಂಡಳಿ ಸ್ಥಾಪಿಸಿ ಅನುಕೂಲ ಮಾಡಿಕೊಡುವ ದಿಶೆಯಲ್ಲಿನ ಸರ್ಕಾರದ ಕ್ರಮಗಳೇನು; | ಪ್ರಶ್ನೆ ಉದ್ಭವಿಸುವುದಿಲ್ಲ. |

| ಈ) | ನೀರಾ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಸಬ್ಸಿಡಿ ಹಣದ ಮೊತ್ತ ಮತ್ತಿತರ ಪ್ರೋತ್ಸಾಹಕ ಯೋಜನಾ ಸೌಲಭ್ಯಗಳು ಯಾವುವು? | ರಾಜ್ಯ ಸರ್ಕಾರದ ವತಿಯಿಂದ ಉತ್ಪಾದನಾ ಸುಧಾರಣಾ ಕಾರ್ಯಯೋಜನೆಗಾಗಿ ತೆಂಗಿನಲ್ಲಿ ಸಂಯೋಜಿತ ಬೇಸಾಯ ಯೋಜನೆಯಡಿ, ತೆಂಗು ಅಭಿವೃದ್ಧಿ ಮಂಡಳಿ ವತಿಯಿಂದ ರಚಿಸಲಾಗಿರುವ ನೋಂದಾಯಿತ ತೆಂಗು ಬೆಳೆಗಾರರ ಕಂಪನಿಗಳು (CPCs) ಮತ್ತು ತೋಟಗಾರಿಕೆ ಇಲಾಖೆವತಿಯಿಂದ ರಚಿಸಿರುವ ನೋಂದಾಯಿತ ರೈತ ಉತ್ಪಾದಕ ಸಂಸ್ಥೆಗಳಿಗೆ (FPOs) ಮಾತ್ರ ನೀರಾ ಸಂಸ್ಕರಣಾ ಘಟಕಗಳ ಸ್ಥಾಪನೆಗಾಗಿ ಒಟ್ಟು ಘಟಕ ವೆಚ್ಚದ ಶೇ.50 ರಂತೆ ಗರಿಷ್ಠ ರೂ.1.00 ಕೋಟಿಗಳಿಗೆ ಮೀರದಂತೆ ಸಹಾಯಧನ ನೀಡುವ ಕುರಿತು ಸರ್ಕಾರದ ಹಂತದಲ್ಲಿ ಪರಿಶೀಲಿಸಲಾಗುತ್ತಿದೆ. |
|---|---|---|

**ಸಂಖ್ಯೆ: ತೋಇ 50 ತೋಇವಿ 19**

(ಎಂ.ಸಿ.ಮನಗೂಳಿ)
ತೋಟಗಾರಿಕೆ ಸಚಿವರು

ಎಂ.ಸಿ. ಮನಗೂಳಿ (ಸಿಂದಗಿ)
ತೋಟಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 765 |
| ಸದಸ್ಯರ ಹೆಸರು | ಶ್ರೀ ಗೂಳಿಹಟ್ಟಿ. ಡಿ. ಶೇಖರ್ (ಹೊಸದುರ್ಗ) |
| ಉತ್ತರಿಸಬೇಕಾದ ದಿನಾಂಕ | 12-02-2019 |
| ಉತ್ತರಿಸಬೇಕಾದ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಲ್ಲಿ ಅನುದಾನದ ನಿಯಮಗಳಿಗೆ ಒಳಪಡುವ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸದಿರುವುದರಿಂದ ಶಾಲೆಗಳ ಸಿಬ್ಬಂದಿಗಳು ಮತ್ತು ಸಂಸ್ಥೆಗಳು ಸಂಕಷ್ಟದಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ. |
| ಆ) | ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೆ ಎಷ್ಟು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲೆಗಳನ್ನು ಅನುದಾನಕ್ಕೊಳಪಡಿಸಲಾಗಿದೆ; (ವಿವರ ನೀಡುವುದು) | ಮೂರು ವರ್ಷಗಳಿಂದ ಅನುದಾನಕ್ಕೊಳಪಡಿಸಿದ ಪ್ರಾಥಮಿಕ ಶಾಲೆಗಳ ಸಂಖ್ಯೆ =78<br>ಮೂರು ವರ್ಷಗಳಿಂದ ಅನುದಾನಕ್ಕೊಳಪಡಿಸಿದ ಪ್ರೌಢ ಶಾಲೆಗಳ ಸಂಖ್ಯೆ =33 |
| ಇ) | ಕಳೆದ ಮೂರು ವರ್ಷಗಳಿಂದ ಇಲ್ಲಿಯವರೆಗೂ ಅನುದಾನಕ್ಕೆ ಒಳಪಡಿಸಲು ಅನುಮತಿ ಕೋರಿ ಬಂದಿರುವ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಂಸ್ಥೆಗಳ ಪ್ರಸ್ತಾವನೆಗಳಾವುವು; (ವಿವರ ನೀಡುವುದು) | ಮೂರು ವರ್ಷಗಳಿಂದ ಅನುದಾನಕ್ಕೊಳಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವ ಪ್ರಾಥಮಿಕ ಶಾಲೆಗಳ ಸಂಖ್ಯೆ =81<br>ಮೂರು ವರ್ಷಗಳಿಂದ ಅನುದಾನಕ್ಕೊಳಪಡಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವ ಪ್ರೌಢ ಶಾಲೆಗಳ ಸಂಖ್ಯೆ =28<br>**(ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ)** |
| ಈ) | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಲ್ಲಿ ಅನುದಾನಕ್ಕೆ ಒಳಪಡುವ ನಿಯಮಗಳಿಗೆ ಅನುಸಾರವಾಗಿ ಪ್ರಸ್ತಾವನೆ ಸಲ್ಲಿಸಿರುವ ಶಾಲೆಗಳನ್ನು ಅನುದಾನಕ್ಕೆ ಒಳಪಡಿಸದೇ ಇರಲು ಕಾರಣವೇನು? | ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳನ್ನು ಅನುದಾನಕ್ಕೊಳಪಡಿಸುವ ನಿಯಮಗಳನ್ವಯ ಪ್ರಸ್ತಾವನೆಗಳನ್ನು ಪರಿಶೀಲಿಸಿ ಸಹಾಯಾನುದಾನಕ್ಕೆ ಒಳಪಡಿಸಲಾಗಿದೆ.<br>ಆದೇಶ ಸಂಖ್ಯೆ:ಇಡಿ 18 ಎಸ್ಇಪಿ 2018(ಭಾಗ), ದಿನಾಂಕ:02-01-2019ರಲ್ಲಿ ದಿನಾಂಕ:01-06-1987 ರಿಂದ 1994-95ನೇ ಅವಧಿಯಲ್ಲಿ ಪ್ರಾರಂಭವಾದ ಅನುದಾನರಹಿತ ಪ್ರಾಥಮಿಕ, ಪ್ರೌಢಶಾಲೆ ಹಾಗೂ ಪದವಿಪೂರ್ವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸಲ್ಲಿಕೆಯಾಗುವ ಕೋರಿಕೆ/ ಪ್ರಸ್ತಾವನೆಗಳನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದಲ್ಲ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆ/ಪದವಿಪೂರ್ವ ಶಿಕ್ಷಣ ಇಲಾಖೆಯ ಅಧೀನ ಕಛೇರಿಗಳಲ್ಲಿಯೂ ಸಹ ಅಂತಹ ಪ್ರಸ್ತಾವನೆ/ ಕೋರಿಕೆಗಳನ್ನು ಪರಿಗಣಿಸಬಾರದೆಂದು ಆದೇಶಿಸಲಾಗಿದ್ದು, ಪ್ರಸ್ತುತ ಯಾವುದೇ ಪ್ರಸ್ತಾವನೆಗಳನ್ನು ಪರಿಗಣಿಸುತ್ತಿಲ್ಲ. |

ಇಡಿ 58 ಪಿಎಂಸಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಪ್ರಾಥಮಿಕ ಶಾಲೆಗಳ ಪಟ್ಟಿ

| ಕ್ರ.ಸಂ. | ಜಿಲ್ಲೆಯ ಹೆಸರು | ಶಾಲೆಯ ಹೆಸರು |
|---|---|---|
| 1. | ಕೋಲಾರ | ಆದರ್ಶ ಕಿರಿಯ ಪ್ರಾಥಮಿಕ ಶಾಲೆ, ಮೈಲಾಪುರ, ಮುಳಬಾಗಿಲು ತಾಲ್ಲೂಕು, ಕೋಲಾರ ಜಿಲ್ಲೆ. |
| 2. | ದಾವಣಗೆರೆ | ಶಾಂತಿನಿಕೇತನ ಹಿರಿಯ ಪ್ರಾಥಮಿಕ ಶಾಲೆ, ವಿದ್ಯುತ್‌ನಗರ, ದಾವಣಗೆರೆ |
| 3. | ಮಂಡ್ಯ | 1. ಅರುಣೋದಯ ಪ್ರಾಥಮಿಕ ಶಾಲೆ<br>2. ಕೆಂಪಮ್ಮ ಹಿರೇಗೌಡ ಹಿರಿಯ ಪ್ರಾಥಮಿಕ ಶಾಲೆ<br>3. ಕಾಳಿಕಾಂಬ ಹಿರಿಯ ಪ್ರಾಥಮಿಕ ಶಾಲೆ, ಮದ್ದೂರು |
| 4 | ಮಧುಗಿರಿ | ಸರ್ವೋದಯ ಗ್ರಾಮ ವಿದ್ಯಾಪ್ರಚಾರಕ ಸಂಘ (ರಿ), ಕೊಡಿಗೇನಹಳ್ಳಿ, ಮಧುಗಿರಿ. |
| 5. | ಚಿಕ್ಕಮಗಳೂರು | ಗುಡ್‌ಶೆಫರ್ಡ್ ಹಿರಿಯ ಪ್ರಾಥಮಿಕ ಶಾಲೆ, ಚಿಕ್ಕಮಗಳೂರು. |
| 6. | ಮಧುಗಿರಿ | 1. ಅಂತ್ಯೋದಯ ಕಿರಿಯ ಪ್ರಾಥಾಮಿಕ ಶಾಲೆ. ಅರಸೀಕೆರೆ, ಪಾವಗಡ<br>2. ಅಂತ್ಯೋದಯ ಕಿರಿಯ ಪ್ರಾಥಮಿಕ ಶಾಲೆ, ಮಂಗಳವಾಡ, ಪಾವಗಡ |
| 7 | ಚಿತ್ರದುರ್ಗ | ನೋಬೆಲ್ ಹಿರಿಯ ಪ್ರಾಥಮಿಕ ಶಾಲೆ, ಚಿತ್ರದುರ್ಗ |
| 8 | ದಾವಣಗೆರೆ | ತರಳಬಾಳು ಹಿರಿಯ ಪ್ರಾಥಮಿಕ ಶಾಲೆ, ಬಾಡ |
| 9 | ಬೆಂಗಳೂರು ಉತ್ತರ ಜಿಲ್ಲೆ | ಅಲ್‌ಅಮೀನ್ ಉರ್ದು ಹಿರಿಯ ಪ್ರಾಥಮಿಕ ಶಾಲೆ, ದೇವರಜೀವನಹಳ್ಳಿ. |
| 10 | ಬಳ್ಳಾರಿ | 1. ಹಮ್‌ದರ್ದ್ ಹಿರಿಯ ಪ್ರಾಥಮಿಕ ಶಾಲೆ, ಹೊಸಹಳ್ಳಿ, ಬಳ್ಳಾರಿ<br>2. ವಿನಾಯಕ ಸರಸ್ವತಿ ವಿದ್ಯಾಪೀಠ, ಹೊಸಪೇಟೆ, ಬಳ್ಳಾರಿ<br>3. ವಿಶ್ವಸ್ಫೂರ್ತಿ ಸಂಸ್ಥೆ ಬೊಮ್ಮನಗಟ್ಟ, ಬಳ್ಳಾರಿ,<br>4. ಶ್ರೀ ಶರಣಮಲ್ಲಪ್ಪ ವಿದ್ಯಾಸಂಸ್ಥೆ, ಸಿಂಧಿಗೇರಿ, ಬಳ್ಳಾರಿ |
| 11 | ಬೀದರ | 1. ಶಂಭುಲಿಂಗೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಸಿಂಧೋಲ, ಬೀದರ<br>2. ಇಂದಿರಾ ಹಿರಿಯ ಪ್ರಾಥಮಿಕ ಶಾಲೆ ಉರ್ದು ಪ್ರತಾಪ ನಗರ, ಬೀದರ<br>3. ಶಿವಾನಂದ ಹಿರಿಯ ಪ್ರಾಥಮಿಕ ಶಾಲೆ, ವಿದ್ಯಾ ನಗರ, ಬೀದರ<br>4. ಬಿಚ್ಚುಬಾಬಾ ಹಿರಿಯ ಪ್ರಾಥಮಿಕ ಶಾಲೆ, ಮೈಲೂರು, ಬೀದರ<br>5. ಕ್ವೀನ್ ಕಾನ್ವೆಂಟ್ ಹಿರಿಯ ಪ್ರಾಥಮಿಕ ಶಾಲೆ, ಬೀದರ<br>6. ಸ್ವಾಮಿ ವಿವೇಕಾನಂದ ಹಿರಿಯ ಪ್ರಾಥಮಿಕ ಶಾಲೆ, ಕಮಠಾಣಾ, ಬೀದರ<br>7. ಜ್ಞಾನೋದಯ ಹಿರಿಯ ಪ್ರಾಥಮಿಕ ಶಾಲೆ, ಐನಾಪೂರ, ಬೀದರ |
| 12 | ಕಲಬುರಗಿ | 1. ದಾರ್ಮೈನ್ ಹಿರಿಯ ಪ್ರಾಥಮಿಕ ಶಾಲೆ, ಭಂಕೂರ, ಕಲಬುರಗಿ<br>2. ರಾಹುಲ ಹಿರಿಯ ಪ್ರಾಥಮಿಕ ಶಾಲೆ, ಒಕ್ಕಲಗೇರಾ, ಕಲಬುರಗಿ<br>3. ಸೂರ್ಯಕಿರಣ ಹಿರಿಯ ಪ್ರಾಥಮಿಕ ಶಾಲೆ, ರಾಮೇಶ್ವರ ನಗರ, ಕಲಬುರಗಿ<br>4. ನೇತಾಜಿ ಹಿರಿಯ ಪ್ರಾಥಮಿಕ ಶಾಲೆ, ಫಜಲಪೂರ, ನೆಹರುಗಂಜ, ಕಲಬುರಗಿ<br>5. ಚನ್ನಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಮುನಿಮಸಂಘ, ಕಲಬುರಗಿ<br>6. ವಿಶ್ವೇಶ್ವರಯ್ಯ ಹಿರಿಯ ಪ್ರಾಥಮಿಕ ಶಾಲೆ, ಜಯನಗರ, ಕಲಬುರಗಿ<br>7. ಸಿದ್ಧೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಕಿಣ್ಣಿಸುಲ್ತಾನ, ಆಳಂದ, ಕಲಬುರಗಿ |
| 13 | ಕೊಪ್ಪಳ | 1. ನೇತಾಜಿ ಹಿರಿಯ ಪ್ರಾಥಮಿಕ ಶಾಲೆ, ಚಳ್ಳೂರಿ ಕ್ಯಾಂಪ್, ಗಂಗಾವತಿ<br>2. ಶರಣಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಎರಡೋಣಾ, ಗಂಗಾವತಿ<br>3. ನೆಹರು ಹಿರಿಯ ಪ್ರಾಥಮಿಕ ಶಾಲೆ, ನವಲಿ, ಗಂಗಾವತಿ<br>4. ನೇತಾಜಿ ಹಿರಿಯ ಪ್ರಾಥಮಿಕ ಶಾಲೆ, ಹುಳಕಿಹಾಳ, ಗಂಗಾವತಿ<br>5. ರೇಣುಕಾ ಹಿರಿಯ ಪ್ರಾಥಮಿಕ ಶಾಲೆ, ಕಾರಟಗಿ, ಗಂಗಾವತಿ<br>6. ಸರ್ವೋದಯ ಹಿರಿಯ ಪ್ರಾಥಮಿಕ ಶಾಲೆ, ಕಾರಟಗಿ ಗಂಗಾವತಿ<br>7. ಟ್ರಿನಿಟಿ ಹಿರಿಯ ಪ್ರಾಥಮಿಕ ಶಾಲೆ, ಕೊಪ್ಪಳ<br>8. ಶ್ರೀ ಮುರಾರಕಾ ಹಿರಿಯ ಪ್ರಾಥಮಿಕ ಶಾಲೆ, ಶಿವಪೂರ ಕೊಪ್ಪಳ<br>9. ರಾಮಕೃಷ್ಣ ಹಿರಿಯ ಪ್ರಾಥಮಿಕ ಶಾಲೆ, ಕುಷ್ಟಗಿ |
| 14 | ಯಾದಗಿರಿ | 1. ಶ್ರೀ ಶರಣಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಕಕ್ಕೇರಾ, ಸುರಪೂರ<br>2. ಶ್ರೀ ಶರಣಬಸವೇಶ್ವರ ಹಿರಿಯ ಪ್ರಾಥಮಿಕ ಶಾಲೆ, ಯು.ಕೆ.ಪಿ ಕ್ಯಾಂಪ್, ಕಕ್ಕೇರಾ, ಸುರಪೂರ<br>3. ಖೈರುಲ್ ಬಷೀರ ಉರ್ದು ಕಿರಿಯ ಪ್ರಾಥಮಿಕ ಶಾಲೆ, ರಂಗಂಪೇಟೆ, ಸುರಪೂರ |

| | | |
|---|---|---|
| 15 | ಬಾಗಲಕೋಟೆ | ಚರಂತಿಮಠ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಶಿರೂರ, ತಾ:ಬಾದಾಮಿ |
| 16 | ವಿಜಯಪುರ | 1. ಸಂಗಮೇಶ್ವರ ಕನ್ನಡ ಹಿ.ಪ್ರಾ ಶಾಲೆ. [illegible]<br>2. ಸೌದೇಶ್ವರ ಹಿರಿಯ ಪ್ರಾ.ಶಾಲೆ. ಜಿಗಜೀವಣಗಿ, ಇಂಡಿ ತಾಲ್ಲೂಕು.<br>3. ಮಹಾತ್ಮಾ ಫುಲೇ, ಹಿ.ಪ್ರಾ ಶಾಲೆ, ಕಲ್ಯಾಳ ವಸ್ತಿ ಜಿಗಜೀವಣಗಿ, ಇಂಡಿ ತಾಲ್ಲೂಕು.<br>4. ಬ್ರಹ್ಮಲಿಂಗೇಶ್ವರ ಹಿರಿಯ ಪ್ರಾಥಮಿಕ ಶಾಲೆ, ತಾಳಿಕೋಟಿ, ತಾ:ಮುದ್ದೇಬಿಹಾಳ<br>5. ಬಸವಬಾಲಭಾರತಿ.ಕ.ಹಿ.ಪ್ರಾ ಶಾಲೆ, ಢವಳಗಿ, ತಾ:ಮುದ್ದೇಬಿಹಾಳ<br>6. ಬಾಪೂಜಿ ಕನ್ನಡ ಹಿ.ಪ್ರಾ ಶಾಲೆ, ಬಬಲೇಶ್ವರ, ತಾ:ವಿಜಯಪುರ<br>7. ಮಹರ್ಷಿ ವಾಲ್ಮೀಕಿ ಕ.ಹಿ.ಪ್ರಾ.ಶಾಲೆ, ದೇವರ .ಹಿಪ್ಪರಗಿ ತಾ:ಸಿಂದಗಿ<br>8. ಚನ್ನವೀರೇಶ್ವರ ಕ.ಹಿ.ಪ್ರಾ ಶಾಲೆ, ನಿಡೋಣಿ, ತಾ:ವಿಜಯಪುರ<br>9. ಬಿ.ಡಿ.ಇ ಖಾಸಗಿ ಕ ಹಿ.ಪ್ರಾ ಶಾಲೆ. ವಿಜಯಪುರ<br>10. ಪ್ರಗತಿಪರ ಕ ಹಿ ಪ್ರಾ.ಶಾಲೆ ದೇವಣಗಾಂವ, ತಾ:ಸಿಂದಗಿ<br>11. ರಾಜೀವಗಾಂಧಿ ಕ.ಹಿ.ಪ್ರಾ.ಶಾಲೆ, ವಿಜಯಪುರ<br>12. ಸರಸ್ವತಿ ಹಿ.ಪ್ರಾ. ಶಾಲೆ, ವಿಜಯಪುರ<br>13. ಜೈ ಹನುಮಾನ ಹಿ.ಪ್ರಾ ಶಾಲೆ. ಕನ್ನಾಳ, ತಾ:ವಿಜಯಪುರ<br>14. ಗ್ಯಾಲಕ್ಸಿ ಹಿ.ಪ್ರಾ ಶಾಲೆ, ವಿಜಯಪುರ |
| 17 | ಬೆಳಗಾವಿ | ವಿವೇಕಾನಂದ ಕನ್ನಡದ ಹಿರಿಯ ಪ್ರಾಥಮಿಕ ಶಾಲೆ. ಬಟಕುರ್ಕಿ, ತಾ:ರಾಮದುರ್ಗ |
| 18 | ಚಿಕ್ಕೋಡಿ | 1 ಸಂಟ್ ಪೀಟರ್ಸ್ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ. ಹಾರೂಗೇರಿ. ತಾ:ರಾಯಬಾಗ<br>2. ಶ್ರೀ ವಿದ್ಯಾನಾಗರ ಶಿಕ್ಷಣ ಸಂಸ್ಥೆ ಹಿರಕೋಡಿಯ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ, ಹಿರೇಕೋಡಿ, ತಾ:ಚಿಕ್ಕೋಡಿ<br>3. ಶ್ರೀ ಓಂ ಶಿಕ್ಷಣ ಸಂಸ್ಥೆ ಹಿರೆಕೋಡಿಯ ಕನ್ನಡ ಮಾಧ್ಯಮ ಹಿರಿಯ ಪ್ರಾಥಮಿಕ ಶಾಲೆ, ಹಿರೇಕೋಡಿ ತಾ:: ಚಿಕ್ಕೋಡಿ<br>4. ಶ್ರೀ ಬಸವೇಶ್ವರ ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ, ಮಮದಾಪುರ, ತಾ:ಗೋಕಾಕ<br>5. ಕನ್ನಡ ಮಾಧ್ಯಮ ಪ್ರಾಥಮಿಕ ಶಾಲೆ. ಸಂಕೋನಟ್ಟಿ, ತಾ:ಅಥಣಿ<br>6. ಕನಕ ಶಿಕ್ಷಣ ಸಂಸ್ಥೆಯ ಕ.ಮಾ.ಪ್ರಾ.ಶಾಲೆ, ಶಿರಹಟ್ಟಿ. ತಾ:: ಅಥಣಿ<br>7. ಹುಲಕಾಂತೇಶ್ವರ ಕ.ಮಾ.ಪ್ರಾ.ಶಾಲೆ, ಖನದಾಳ, ತಾ:: ರಾಯಬಾಗ<br>8. ಮರಾಠಾ ಮಂಡಳ ನಿಪ್ಪಾಣಿ ಸಂಚಲಿತ ಮರಾಠಿ ವಿದ್ಯಾನಿಕೇತನ ಪ್ರಾಥಮಿಕ ಶಾಲೆ, ನಿಪ್ಪಾಣಿ, ತಾ:ಚಿಕ್ಕೋಡಿ<br>9. ವಿವೇಕಾನಂದ ಶಿಕ್ಷಣ ಸಂಸ್ಥೆ. ಮೋಳೆ. ತಾ:ಅಥಣಿ<br>10. ಮುರುಳಿಶಂಕರ ದೇವರ ಹಿ.ಪ್ರಾ.ಶಾಲೆ. ಅಥಣಿ |
| 19 | ಧಾರವಾಡ | 1. ಝಾಕೀರ ಹುಸೇನ ಉರ್ದು ಪ್ರಾಥಮಿಕ ಶಾಲೆ, ಧಾರವಾಡ<br>2. ಮಾರುತಿ ವಿದ್ಯಾವರ್ಧಕ ಸಂಘದ ಕನ್ನಡ ಹಿರಿಯ ಪ್ರಾ.ಶಾಲೆ. ಈಶ್ವರನಗರ ಹುಬ್ಬಳ್ಳಿ<br>3. ಚೇತನಾ ಹಿರಿಯ ಪ್ರಾಥಮಿಕ ಶಾಲೆ. ಹುಬ್ಬಳ್ಳಿ<br>4. ಶ್ರೀ ವಾಸುದೇವ ಕನ್ನಡ ಹಿರಿಯ ಪ್ರಾಥಮಿಕ ಶಾಲೆ, ಹೆಬ್ಬಳ್ಳಿ, ತಾ:ಧಾರವಾಡ<br>5. ಮೆಹಬೂಬ ಉರ್ದು ಹಿರಿಯ ಪ್ರಾಥಮಿಕ ಶಾಲೆ. ಹುಬ್ಬಳ್ಳಿ |
| 20 | ಗದಗ | 1. ಬಿ.ಸಿ.ಬಂಗಾರಿ ಹಿ.ಪ್ರಾ.ಶಾಲೆ, ಮುಳಗುಂದ, ತಾ:ಗದಗ<br>2 ಜ್ಞಾನಭಾರತಿ ವಿದ್ಯಾಸಂಸ್ಥೆ. ಹಿ.ಪ್ರಾ.ಶಾಲೆ, ಗದಗ<br>3. ಮಾರಲ್ ಕನ್ನಡ ಪ್ರಾಥಮಿಕ ಶಾಲೆ, ಗದಗ<br>4. ಅಂಜುಮನ್ ಉರ್ದು ಹಿರಿಯ ಪ್ರಾಥಮಿಕ ಶಾಲೆ, ಗದಗ |
| 21 | ಹಾವೇರಿ | 1. ಮಹಾತ್ಮಾ ಗಾಂಧಿ ಪ್ರಾಥಮಿಕ ಶಾಲೆ, ದೇವಗಿರಿ. ತಾ: ಹಾವೇರಿ<br>2. ಶ್ರೀ ಶಂಕರಾನಂದ ಹಿರಿಯ ಪ್ರಾಥಮಿಕ ಶಾಲೆ, ಹಲಗೇರಿ. ತಾ: ರಾಣೆಬೆನ್ನೂರು<br>3. ಜೆ.ಎಂ.ಜೆ ಹಿರಿಯ ಪ್ರಾಥಮಿಕ ಶಾಲೆ, ಕರ್ಜಗಿ, ತಾ: ಹಾವೇರಿ<br>4. ಹುಸೇನಿಯಾ ಉರ್ದು ಹಿರಿಯ ಪ್ರಾಥಮಿಕ ಶಾಲೆ, ಬಂಕಾಪುರ. ತಾ: ಶಿಗ್ಗಾಂವ |

## ಪ್ರೌಢಶಾಲೆಗಳ ಪಟ್ಟಿ

| ಕ್ರ.ಸಂ. | ಜಿಲ್ಲೆಯ ಹೆಸರು | ಶಾಲೆಯ ಹೆಸರು |
|---|---|---|
| 1. | ಬೆಂಗಳೂರು | ಚೆಲ್ಡನ್ ಮೆಮೋರಿಯಲ್ ನ್ಯಾಷನಲ್ ಪ್ರೌಢಶಾಲೆ, ಯಶವಂತಪುರ, ಬೆಂಗಳೂರು. |
| 2. | ಮೈಸೂರು | ಪುನಿತ್ ಪ್ರೌಢಶಾಲೆ, ಹಂಪಾಪುರ, ಕೆ.ಆರ್.ನಗರ, ತಾಲ್ಲೂಕು, ಮೈಸೂರು ಜಿಲ್ಲ. |
| 3. | ಹಾಸನ ಜಿಲ್ಲೆ | ಪೂರ್ಣ ಬಾಲಿಕಾ ಪ್ರೌಢ ಶಾಲೆ, ಆಲೂರು ತಾಲ್ಲೂಕು, ಹಾಸನ ಜಿಲ್ಲೆ. |
| 4. | ಹಾಸನ | ಪ್ರಿಯದರ್ಶಿನಿ ಪ್ರೌಢ ಶಾಲ, ಹೊಳೆನರಸೀಪುರ ತಾಲ್ಲೂಕು, ಹಾಸನ ಜಿಲ್ಲೆ |
| 5 | ರಾಮನಗರ | ವಿಶ್ವಮಾನವ ಪ್ರೌಢ ಶಾಲೆ, ಕೊರಣಕೆರೆ, ಬೆಟ್ಟದ ತಪ್ಪಲು, ಚನ್ನಪಟ್ಟಣ ತಾಲ್ಲೂಕು, ರಾಮನಗ ಜಿಲ್ಲೆ. |
| 6. | ಮಧುಗಿರಿ | ವಿ.ಎಸ್.ಕನ್ನಡ ಪ್ರೌಢ ಶಾಲ, ಪಾವಗಡ ಟೌನ್, ಮಧುಗಿರಿ ಶೈಕ್ಷಣಿಕ ಜಿಲ್ಲೆ. |
| 7 | ಬೀದರ | 1. ವೆಂಕಟೇಶ್ವರ ಪ್ರೌಢ ಶಾಲೆ, ನಿರ್ಣಾ, ಬೀದರ<br>2. ಅಲ್ ಹಮೀದ್ ಉರ್ದು ಮೆಮೋರಿಯಲ್ ಪ್ರೌಢ ಶಾಲೆ, ಬೀದರ<br>3. ಎಸ್.ಎನ್.ಇ. ಪ್ರೌಢ ಶಾಲೆ, ಕಾಸರತಗಾಂವ, ಬೀದರ<br>4. ಬಸವೇಶ್ವರ ಪ್ರೌಢ ಶಾಲೆ, ಕಪ್ಪರಗಾಂವ, ಬೀದರ<br>5. ಸೇಂಟ್ ಜೋಸೆಫ್ ಪ್ರೌಢ ಶಾಲೆ, ಬೀದರ |
| 8 | ಕಲಬುರಗಿ | 1. ಇಬ್ರಾಹಿಂ ಪ್ರೌಢ ಶಾಲೆ, ಮೋಮಿನಪೂರ, ಕಲಬುರಗಿ<br>2. ಅನ್ವರ ಪ್ರೌಡ ಶಾಲ ಮೋಮಿನಪೂರ ಕಲಬುರಗಿ<br>3. ಕಂಠಿ ಬಸವೇಶ್ವರ ಪ್ರೌಢ ಶಾಲೆ, ಕೊಡದೂರು ಚಿತ್ತಾಪೂರ<br>4. ಪ್ರೇರಣಾ ಪ್ರೌಢ ಶಾಲೆ ಕೋಟನೂರು, (ಡಿ) ಕಲಬುರಗಿ<br>5. ಜೈ ಹನುಮಾನ ಬಿದ್ದಾಪೂರ ಕಾಲೋನಿ, ಕಲಬುರಗಿ |
| 9 | ಕೊಪ್ಪಳ | ಬಿ.ವಿ.ಟಿ. ಪ್ರೌಢ ಶಾಲೆ ಕುಷ್ಟಗಿ |
| 10 | ಬಾಗಲಕೋಟೆ | ಅಂಜುಮನ್ ಉರ್ದು ಪ್ರೌಢಶಾಲೆ, ಬದಾಮಿ |
| 11 | ವಿಜಯಪುರ | 1. ಅಂಬೇಡ್ಕರ ಪ್ರೌಢಶಾಲೆ, ಆಲಮೇಲ, ತಾ:ಸಿಂಧಗಿ<br>2. ಪ್ರಿಯದರ್ಶಿನ ಪ್ರೌಢಶಾಲೆ, ಅಫಜಲ್‌ಪೂರ ಟಿಕ್ಕೆ, ವಿಜಯಪುರ |
| 12 | ಬೆಳಗಾವಿ | 1. ಕುಪ್ಪಟಗಿರಿ ಪ್ರೌಢಶಾಲೆ, ಕುಪ್ಪಟಗಿರಿ ತಾ:ಖಾನಾಪೂರ<br>2. ಶ್ರೀ ಬ್ರಹ್ಮಲಿಂಗೇಶ್ವರ ಪ್ರೌಢಶಾಲೆ, ಅಲತಗಾ, ತಾ:ಜಿ:ಬೆಳಗಾವಿ |
| 13 | ಧಾರವಾಡ | 1. ಬ್ರಹ್ಮಾನಂದ ಪ್ರೌಢಶಾಲೆಡ, ನೇಕಾರ ನಗರ ಹುಬ್ಬಳ್ಳಿ<br>2. ಶ್ರೀ ಶಿವಲಿಂಗೇಶ್ವರ ಪ್ರೌಢಶಾಲೆ, ಮಂಟೂರ, ತಾ:ಹುಬ್ಬಳ್ಳಿ<br>3. ಸಿದ್ಧರಾಮೇಶ್ವರ ಪ್ರೌಢಶಾಲೆ, ಅಣ್ಣಿಗೇರಿ, ತಾ:ನವಲಗುಂದ |
| 14 | ಗದಗ | ಶ್ರೀಮತಿ ಹಂಪವ್ವ ಪಿಳ್ಳೆ ಪ್ರೌಢಶಾಲೆ, ಗದಗ |
| 15 | ಹಾವೇರಿ | 1. ಶ್ರೀ ವಿನಾಯಕ ಪ್ರೌಢಶಾಲೆ, ಹಿರೇಕೆರೂರು.<br>2. ಶ್ರೀ ಬಸವಭಾರತಿ ಪ್ರೌಢಶಾಲೆ, ಹಾವೇರಿ ತಾ: ಹಾವೇರಿ |

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **311** |
| ಸದಸ್ಯರ ಹೆಸರು | : | ಶ್ರೀ ಹಾಲಪ್ಪ ಹರತಾಳ್ ಹೆಚ್. (ಸಾಗರ) |
| ಉತ್ತರಿಸಬೇಕಾದ ದಿನಾಂಕ | : | 12.02.2019 |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿಗಳು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಲ್ಲಿ ವಿಷಯ ಪರಿವೀಕ್ಷಕರ, ಅಕ್ಷರ ದಾಸೋಹ ಸಹಾಯಕ ನಿರ್ದೇಶಕರು ಮತ್ತು ಉಪಯೋಜನಾ ಸಮನ್ವಯಾಧಿಕಾರಿಗಳ ಹುದ್ದೆಗಳಿಗೆ ಇಲಾಖಾ ಆಂತರಿಕ ಪರೀಕ್ಷೆಯ ಮೂಲಕ ನಿಯೋಜನೆ ಮಾಡಲಾಗುತ್ತಿರುವುದರಿಂದ ಸೇವಾ ಹಿರಿತನ ಹೊಂದಿರುವ ಪ್ರೌಢ ಶಾಲಾ ಮುಖ್ಯೋಪಾಧ್ಯಾಯರಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ಅಧಿನಿಯಮ-2017 (ಸಂ.ವ್ಯ.ಶಾ.ಇ) 22 ಶಾಸನ 2017, ದಿನಾಂಕ:18.04.2017)ರ ನಿಯಮ 5ರಂತೆ ಪರಿಗಣಿಸಿ (1) ಸಹಾಯಕ ನಿರ್ದೇಶಕರು (ಮಧ್ಯಾಹ್ನ ಉಪಹಾರ ಊಟ) ಕ್ಷೇತ್ರ ಸಂಪನ್ಮೂಲ ವ್ಯಕ್ತಿ, ಕ್ಲಸ್ಟರ್ ಸಂಪನ್ಮೂಲ ವ್ಯಕ್ತಿ, ಸಹಾಯಕ ಯೋಜನಾ ಸಮನ್ವಯಾಧಿಕಾರಿ, ಶಿಕ್ಷಣ ಸಮನ್ವಯಾಧಿಕಾರಿ, ಹಾಗೂ ವಿಷಯ ತಪಾಸಕರ ಹುದ್ದೆಗಳನ್ನು ಸರ್ಕಾರವು ನಿರ್ದಿಷ್ಠ ಹುದ್ದೆಗಳೆಂದು ಪರಿಗಣಿಸಿ ಈ ಹುದ್ದೆಗಳಿಗೆ ಲಿಖಿತ ಪರೀಕ್ಷೆ ನಡೆಸಿ ಕೌನ್ಸಲಿಂಗ್ ಮೂಲಕವೇ ಹುದ್ದೆಗಳನ್ನು ಭರ್ತಿ ಮಾಡಬೇಕಾಗಿದೆ. ಮುಖ್ಯ ಶಿಕ್ಷಕರ ವೃಂದದವರಿಗೆ ಸದರಿ ಪರೀಕ್ಷೆಯಲ್ಲಿ ಭಾಗವಹಿಸಲು ಅವಕಾಶ ನೀಡಲಾಗಿರುವುದರಿಂದ ಯಾವುದೇ ಅನ್ಯಾಯವಾಗಿರುವುದಿಲ್ಲ. |
| ಆ. | ಈ ಹುದ್ದೆಗಳಿಗೆ ಪ್ರೌಢಶಾಲಾ ಮುಖ್ಯೋಪಾದ್ಯಾಯರನ್ನು ನೇಮಕ ಮಾಡಲು ಇರುವ ತೊಂದರೆಗಳೇನು (ವಿವರ ಒದಗಿಸುವುದು): | ಈ ಹುದ್ದೆಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಮುಖ್ಯ ಶಿಕ್ಷಕರ ವೃಂದದ ಅಧಿಕಾರಿಗಳನ್ನು ನೇಮಕ ಮಾಡಿಕೊಳ್ಳಲಾಗುತ್ತಿದೆ. |
| ಇ | ಸದರಿ ಹುದ್ದೆಗಳಿಗೆ ಮುಖ್ಯೋಪಾದ್ಯಯರನ್ನು ನೇಮಕ ಮಾಡಲು ಕೈಗೊಂಡಿರುವ ಕ್ರಮವೇನು ? | ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 16 ಇಟಿಆರ್ 2017 ದಿನಾಂಕ:18.12.2017ರಂತೆ ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ / ತತ್ಸಮಾನ ಗ್ರೂಪ್-ಬಿ ವೃಂದದ ಹುದ್ದೆಗಳಿಗೆ ಲಿಖಿತ ಪರೀಕ್ಷೆ ನಡೆಸಿ, ಕೌನ್ಸಿಲಿಂಗ್ ಮೂಲಕ ಅಧಿಸೂಚಿತ ಹುದ್ದೆಗಳನ್ನು ಭರ್ತಿ ಮಾಡಲಾಗಿದೆ. ಉಳಿದಂತೆ ಖಾಲಿ ಇರುವ ಹುದ್ದೆಗಳನ್ನು ಪರೀಕ್ಷೆ ನಡೆಸುವ ಮೂಲಕ ಭರ್ತಿ ಮಾಡಲಾಗುತ್ತಿದೆ. |

ಸಂಖ್ಯೆ: ಇಡಿ 27 ಎಸ್‌ಓಹೆಚ್ 2019

(ಹೆಚ್. ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 448
**ಸದಸ್ಯರ ಹೆಸರು** : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)
**ಉತ್ತರಿಸುವ ದಿನಾಂಕ** : 12/02/2019
**ಉತ್ತರಿಸುವ ಸಚಿವರು** : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ.ಸ | ವಿಷಯ | ಉತ್ತರ |
|---|---|---|
| ಅ | ದಕ್ಷಿಣ ಕನ್ನಡ ಜಿಲ್ಲೆ ಸೇರಿದಂತೆ ಕರಾವಳಿಯಲ್ಲಿ ಹಿಂದು ನಾಯಕರ ಹತ್ಯೆಗಳಿಗೆ ಮತೀಯವಾದಿ ಸಂಘಟನೆಗಳಿಂದ ಆತ್ಮಾಹುತಿ ದಾಳಿಯನ್ನು ನಡೆಸುವ ಬಗ್ಗೆ ಗುಪ್ತಚರ ಇಲಾಖೆಗೆ ಮಾಹಿತಿ ಬಂದಿದೆಯೇ; | ಕರ್ನಾಟಕದ ರಾಜ್ಯದ ಕರಾವಳಿ ಜಿಲ್ಲೆಗಳಲ್ಲಿ ಹಿಂದೂ ನಾಯಕರ ಹತ್ಯೆಗಳಿಗೆ ಮತೀಯವಾದಿ ಸಂಘಟನೆಗಳಿಂದ ಆತ್ಮಾಹುತಿ ದಾಳಿಯನ್ನು ನಡೆಸುವ ಬಗ್ಗೆ ಯಾವುದೇ ಪ್ರಕರಣ ದಾಖಲಾಗಿರುವುದಿಲ್ಲ. |
| ಆ | ಹಿಂದೂ ನಾಯಕರ ರಕ್ಷಣೆ ಹಾಗೂ ಭಯೋತ್ಪಾದಕ ಮತೀಯವಾದಿ ಸಂಘಟನೆ ಸದಸ್ಯರ ನಿಗ್ರಹ ಹಾಗೂ ಬಂಧನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? | ರಾಜ್ಯದಲ್ಲಿ ನಾಯಕರ ರಕ್ಷಣೆ ಹಾಗೂ ಭಯೋತ್ಪಾದಕ ಮತೀಯವಾದಿ ಸಂಘಟನೆ ಸದಸ್ಯರ ನಿಗ್ರಹ ಚಟುವಟಿಕೆಗಳ ದಮನಗೊಳಿಸಲು ಈ ಕೆಳಕಂಡ ಮುಂಜಾಗ್ರತಾ ಕ್ರಮಗಳನ್ನು ಸರ್ಕಾರವು ಕೈಗೊಂಡಿದೆ:<br>1. ಭಯೋತ್ಪಾದಕ ಚಟುವಟಿಕೆಗಳನ್ನು ನಿಗ್ರಹಿಸಲು ಭಯೋತ್ಪಾದಕ ನಿಗ್ರಹ ದಳವು (ATC) 1992ರಿಂದ ಕಾರ್ಯ ಪ್ರವೃತ್ತವಾಗಿದೆ.<br>2. ದಿನಾಂಕ:12.12.2008ರಂದು ಭಯೋತ್ಪಾದಕ ಚಟುವಟಿಕೆಯನ್ನು ಪರಿಣಾಮಕಾರಿಯಾಗಿ ನಿಗ್ರಹಿಸಲು ಪ್ರತ್ಯೇಕವಾಗಿ ಅಂತರಿಕ ಭದ್ರತೆ ವಿಭಾಗ (ISD) ರಚನೆಯಾಗಿರುತ್ತದೆ.<br>3. ದಿನಾಂಕ:02.02.2010ರಿಂದ ಗರುಡ ಕಮಾಂಡೋ ಪಡೆಯನ್ನು (CCT) ರಚನೆ ಮಾಡಿದ್ದು, ಭಯೋತ್ಪಾದಕ ದಾಳಿಯನ್ನು ಎದುರಿಸಲು ಸನ್ನದ್ಧುಗೊಳಿಸಲಾಗಿದೆ.<br>4. ದಿನಾಂಕ:14.01.2011ರಲ್ಲಿ ಪ್ರಮುಖ ಸ್ಥಾವರಗಳ ರಕ್ಷಣೆ ಕುರಿತು ಕರ್ನಾಟಕ ರಾಜ್ಯದ ಕೈಗಾರಿಕಾ ರಕ್ಷಣಾ ಪಡೆಯನ್ನು (KSISF) ರಚಿಸಲಾಯಿತು.<br>5. ದಿನಾಂಕ:19.04.2013ರಲ್ಲಿ ಆಂತರಿಕ ಭದ್ರತಾ ವಿಭಾಗವನ್ನು ಪೊಲೀಸ್ ಠಾಣಾ ಮಟ್ಟಕ್ಕೆ ಉನ್ನತೀಕರಿಸಿ ಭಯೋತ್ಪಾದಕ ಪ್ರಕರಣಗಳನ್ನು ದಾಖಲಿಸುವ ಮತ್ತು ತನಿಖೆ ಕೈಗೊಳ್ಳುವ ಅಧಿಕಾರ ನೀಡಲಾಗಿರುತ್ತದೆ.<br>6. 2 ಪ್ಯಾರಾ ಸ್ಪೆಷಲ್ ಫೋರ್ಸ್ (Military) ಪಡೆಯನ್ನು ಬೆಂಗಳೂರು ನಗರದಲ್ಲಿ ಭಯೋತ್ಪಾದಕ ದಾಳಿಯ ಸಂದರ್ಭದಲ್ಲಿ ಉಪಯೋಗಿಸಿಕೊಳ್ಳಲು ಸ್ಥಾಪಿಸಲಾಗಿದೆ.<br>7. ಜಿಲ್ಲಾ ಮಟ್ಟದಲ್ಲಿ ಭಯೋತ್ಪಾದಕ ಚಟುವಟಿಕೆಯನ್ನು ನಿಗ್ರಹಿಸಲು ಮತ್ತು ದಾಳಿಯನ್ನು ಎದುರಿಸಲು ಯುವ ಪೊಲೀಸ್ ಅಧಿಕಾರಿ ಮತ್ತು ಸಿಬ್ಬಂದಿಗಳಿಗೆ ಆಧುನಿಕ ಶಸ್ತ್ರಾಸ್ತ್ರಗಳ ಬಳಕೆ ಹಾಗೂ ಇನ್ನಿತರೆ ವಿಷಯಗಳಿಗೆ ಸೂಕ್ತ ತರಬೇತಿ ನೀಡಲಾಗುತ್ತಿದೆ. |

ಸಂಖ್ಯೆ: ಹೆಚ್‌ಡಿ 85 ಎಸ್‌ಎಸ್‌ಟಿ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 828
ಸದಸ್ಯರ ಹೆಸರು : ಶ್ರೀ ಅಶೋಕ್ ನಾಯಕ್ ಕೆ.ಬಿ (ಶಿವಮೊಗ್ಗ ಗ್ರಾಮಾಂತರ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ಶಿವಮೊಗ್ಗ ಗ್ರಾಮಾಂತರ ವಿಧಾನಸಭಾ ಕ್ಷೇತ್ರದಲ್ಲಿ RMSA ಯೋಜನೆಯಡಿ ಪ್ರೌಢಶಾಲಾ ಕಟ್ಟಡ ಹಾಗೂ ಪ್ರೌಢಶಾಲಾ ಬಲವರ್ಧನೆ ಯೋಜನೆಯಡಿ ಮಂಜೂರಾದ ಕಾಮಗಾರಿಗಳು ಎಷ್ಟು; | 2009-10 ಮತ್ತು 2010-11ನೇ ಸಾಲಿನಲ್ಲಿ ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದಲ್ಲಿ ಆರ್.ಎಂ.ಎಸ್.ಎ ಯೋಜನೆಯಡಿ 04 ಹೊಸ ಪ್ರೌಢಶಾಲಾ ಕಟ್ಟಡಗಳು ಹಾಗೂ 09 ಪ್ರೌಢಶಾಲಾ ಬಲವರ್ಧನೆ ಕಾಮಗಾರಿಗಳು ಸೇರಿದಂತೆ ಒಟ್ಟು 13 ಕಾಮಗಾರಿಗಳು ಮಂಜೂರಾಗಿರುತ್ತವೆ. |
| (ಆ) 2018-19ನೇ ಸಾಲಿನಲ್ಲಿ ಪಂಚಾಯತ್‌ರಾಜ್ ಇಲಾಖೆಯ ಮುಖಾಂತರ RMSA ಯೋಜನೆಯಡಿ ಮಂಜೂರಾದ ಸರ್ಕಾರಿ ಪ್ರೌಢಶಾಲಾ ಕಟ್ಟಡ ಕಾಮಗಾರಿಗಳು ಪ್ರಾರಂಭವಾಗದೇ ಇರಲು ಕಾರಣಗಳೇನು; | 2018-19ನೇ ಸಾಲಿನಲ್ಲಿ ಆರ್.ಎಂ.ಎಸ್.ಎ ಯೋಜನೆಯಡಿ ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾಕ್ಷೇತ್ರಕ್ಕೆ ಯಾವುದೇ ಕಾಮಗಾರಿ ಮಂಜೂರಾಗಿರುವುದಿಲ್ಲ.<br><br>ರಾಜ್ಯದ್ಯಂತ ಆರ್.ಎಂ.ಎಸ್.ಎ ಯೋಜನೆಯಡಿ 2009-10 ಮತ್ತು 2010-11ನೇ ಸಾಲಿನಲ್ಲಿ ಅನುಮೋದನೆಯಾಗಿ ಕಾಮಗಾರಿ ಕೈಗೆತ್ತಿಕೊಳ್ಳದ 237 ಕಾಮಗಾರಿಗಳು ಹಾಗೂ 2013-14 ರಿಂದ 2017-18ರ ವರೆಗೆ ಯೋಜನಾ ಅನುಮೋದನಾ ಮಂಡಳಿಯಿಂದ ಅನುಮೋದನೆಯಾದ 173 ಕಾಮಗಾರಿಗಳು ಸೇರಿದಂತೆ ಒಟ್ಟು 410 ಕಾಮಗಾರಿಗಳ ಯೋಜನಾ ಅನುಮೋದನಾ ಮೊತ್ತ ರೂ.433.20 ಕೋಟಿಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 01 ಎಂ.ಸಿ.ಡಿ 2018, ದಿನಾಂಕ:08.03.2018 ರಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಿ, ಪಂಚಾಯತ್‌ರಾಜ್ ಇಲಾಖೆ ಮೂಲಕ ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ. ಸದರಿ ಕಾಮಗಾರಿಗಳಿಗೆ ಕೇಂದ್ರ ಸರ್ಕಾರದ ಪಾಲಿನ ಅನುದಾನ ಈವರೆಗೆ ಬಿಡುಡೆಯಾಗದ ಕಾರಣ ಪಂಚಾಯತ್ ರಾಜ್ ಇಲಾಖೆಗೆ ಅನುದಾನ ಒದಗಿಸಲಾಗಿರುವುದಿಲ್ಲ. |
| (ಇ) ಕಟ್ಟಡ ನಿರ್ಮಾಣಕ್ಕಾಗಿ ಅನುದಾನವನ್ನು ಪಂಚಾಯತ್‌ರಾಜ್ ಇಲಾಖೆಗೆ ಎಂದು ಬಿಡುಗಡೆ ಮಾಡಲಾಗುವುದು; | ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯಾದ ನಂತರ ಪಂಚಾಯತ್‌ರಾಜ್ ಇಲಾಖೆಗೆ ಅನುದಾನ ಬಿಡುಗಡೆ ಮಾಡಲಾಗುತ್ತದೆ. |

| (ಈ) ಬಾಕಿ ಇರುವ ಕಟ್ಟಡಗಳನ್ನು ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು. | 2009-10 ಮತ್ತು 2010-11ನೇ ಸಾಲಿನಲ್ಲಿ ಶಿವಮೊಗ್ಗ ಗ್ರಾಮಾಂತರ ವಿಧಾನ ಸಭಾ ಕ್ಷೇತ್ರದಲ್ಲಿ ಆರ್.ಎಂ.ಎಸ್.ಎ ಯೋಜನೆಯಡಿ ಮಂಜೂರಾಗಿರುವ ಒಟ್ಟು 13 ಕಾಮಗಾರಿಗಳ ಪೈಕಿ 12 ಕಾಮಗಾರಿಗಳು ನಿಗದಿತ ಅವಧಿಯಲ್ಲಿ ಪ್ರಾರಂಭವಾಗದೇ ಇದ್ದ ಕಾರಣ ಮೇಲೆ (ಆ) ರಲ್ಲಿ ವಿವರಿಸಿರುವ 237 ಕಾಮಗಾರಿಗಳ ಪಟ್ಟಿಯಲ್ಲಿ ಸೇರ್ಪಡೆಗೊಂಡಿದ್ದು, ಕೇಂದ್ರ ಸರ್ಕಾರದಿಂದ ಅನುದಾನ ಬಿಡುಗಡೆಯಾದ ನಂತರ ಈ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತದೆ. |
|---|---|

ಇಡಿ 37 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 570
ಸದಸ್ಯರ ಹೆಸರು : ಶ್ರೀ ಪ್ರತಾಪಗೌಡ ಪಾಟೀಲ್ (ಮಸ್ಕಿ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| | ಪ್ರಶ್ನೆ | ಉತ್ತರ |
|---|---|---|
| (ಅ) | 2010-11ನೇ ಸಾಲಿನಲ್ಲಿ ಮಸ್ಕಿ ವಿಧಾನಸಭಾ ಕ್ಷೇತ್ರದ ಸರ್ಜಾಪುರ ಹಾಗೂ ಪಾಮನಕಲ್ಲೂರು ಗ್ರಾಮಗಳಿಗೆ ಮಂಜೂರಾಗಿರುವ, ಕಸ್ತೂರಿಬಾ ವಸತಿ ಶಾಲೆಗಳ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರದವರಿಗೆ ನೀಡಿದ್ದು ಪ್ರಸ್ತುತ ಯಾವ ಹಂತದಲ್ಲಿದೆ; | ಮಸ್ಕಿ ವಿಧಾನ ಸಭಾ ಕ್ಷೇತ್ರದ ಸರ್ಜಾಪುರ ಹಾಗೂ ಪಾಮನಕಲ್ಲೂರು ಗ್ರಾಮಗಳಲ್ಲಿ ಕಸ್ತೂರಿ ಬಾ ವಸತಿ ಶಾಲೆ ಮಂಜೂರಾಗಿರುವುದಿಲ್ಲ. |
| (ಆ) | ಈ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸಲು ವಿಳಂಬವಾಗಿರುವುದಕ್ಕೆ ಕಾರಣವೇನು; | ಉದ್ಭವಿಸುವುದಿಲ್ಲ. |
| (ಇ) | ಈ ವಿಳಂಬ ನೀತಿಯನ್ನು ಅನುಸರಿಸುತ್ತಿರುವ ನಿರ್ಮಿತಿ ಕೇಂದ್ರದವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ? (ಸಂಪೂರ್ಣ ಮಾಹಿತಿ ನೀಡುವುದು) | ಉದ್ಭವಿಸುವುದಿಲ್ಲ. |

ಇಡಿ 44 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 835
ಸದಸ್ಯರ ಹೆಸರು : ಶ್ರೀ ಮಹದೇವ.ಕೆ (ಪಿರಿಯಾಪಟ್ಟಣ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
| --- | --- |
| (ಅ) 2017-18ನೇ ಸಾಲಿನಲ್ಲಿ "ಕರ್ನಾಟಕ ಪಬ್ಲಿಕ್ ಶಾಲೆ" ಯೋಜನೆಯಲ್ಲಿ ಮಂಜೂರಾಗಿರುವ ಶಾಲೆಗಳೆಷ್ಟು; | 2017-18ನೇ ಸಾಲಿನಲ್ಲಿ 'ಕರ್ನಾಟಕ ಪಬ್ಲಿಕ್ ಶಾಲೆ' ಯೋಜನೆಯಲ್ಲಿ ತಾಲ್ಲೂಕಿಗೆ ಒಂದರಂತೆ ಒಟ್ಟು 176 ಶಾಲೆಗಳನ್ನು ಪ್ರಾರಂಭಿಸಲಾಗಿದೆ. |
| (ಆ) ಇಲ್ಲಿಯವರೆಗೂ ಸದರಿ ಶಾಲೆಗಳಿಗೆ ಬಿಡುಗಡೆಯಾಗಿರುವ ಅನುದಾನ ಎಷ್ಟು (ಶಾಲಾವಾರು ವಿವರ ಒದಗಿಸುವುದು); | 2018-19 ನೇ ಸಾಲಿನಲ್ಲಿ ಪ್ರತಿ ಕರ್ನಾಟಕ ಪಬ್ಲಿಕ್ ಶಾಲೆಗಳ ಪ್ರೌಢಶಾಲಾ ವಿಭಾಗದ ಆರ್.ಎಂ.ಎಸ್.ಎ ಖಾತೆಗೆ, ಕರ್ನಾಟಕ ಪಬ್ಲಿಕ್ ಶಾಲೆಗಳ ವಾರ್ಷಿಕ ನಿರ್ವಹಣೆಗಾಗಿ ತಲಾ ರೂ.5.00 ಲಕ್ಷಗಳಂತೆ, ರೂ.880.00 ಲಕ್ಷಗಳನ್ನು ಹಾಗೂ ದುರಸ್ಥಿ ಅಗತ್ಯವಾದ ಕೊಠಡಿಗಳ ಸಂಖ್ಯೆಗನುಗುಣವಾಗಿ ಪ್ರತಿ ಕೊಠಡಿಗೆ ರೂ.1.00 ಲಕ್ಷಗಳಂತೆ ಒಟ್ಟು 864 ಕೊಠಡಿಗಳಿಗೆ ರೂ.864.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಒಟ್ಟಾರೆ ರೂ.1744.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br>(ವಿವರವನ್ನು **ಅನುಬಂಧ** ದಲ್ಲಿ ಒದಗಿಸಿದೆ) |
| (ಇ) ಪ್ರಸ್ತುತ ಸಾಲಿನಲ್ಲಿ "ಕರ್ನಾಟಕ ಪಬ್ಲಿಕ್ ಶಾಲೆ" ಯೋಜನೆಯಡಿಯಲ್ಲಿ ಎಷ್ಟು ಶಾಲೆಗಳನ್ನು ಮಂಜೂರು ಮಾಡಲಾಗಿದೆ ಅಥವಾ ಮಂಜೂರು ಮಾಡುವ ಪ್ರಸ್ತಾವವಿದೆ (ಶಾಲಾವಾರು ವಿವರ ಒದಗಿಸುವುದು)? | 2018-19ನೇ ಸಾಲಿನ ಆಯವ್ಯಯ ಘೋಷಣೆಯಂತೆ 100 ಹೊಸ ಸಂಯೋಜಿತ ಕರ್ನಾಟಕ ಪಬ್ಲಿಕ್ ಶಾಲೆಗಳನ್ನು ಪ್ರಾರಂಭಿಸಲಾಗುತ್ತಿದೆ. |

ಇಡಿ 53 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

## ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

### ನಮೂನೆ-1 ಅ

| ಕ್ರ ಸಂ | ತಾಲ್ಲೂಕು | ವಿಧಾನ ಸಭಾ ಕ್ಷೇತ್ರ | ಶಾಲೆಗಳ ಹೆಸರು | ಡೈಸ್ ಕೋಡ್ | ಒಟ್ಟು ಮಕ್ಕಳ ಸಂಖ್ಯೆ | | | ದುರಸ್ತಿ ಬೇಡಿಕೆ | | |
|---|---|---|---|---|---|---|---|---|---|---|
| | | | | | | | | ಭೌತಿಕ | | ಆರ್ಥಿಕ [ರೂ.ಲಕ್ಷಗಳಲ್ಲಿ] |
| | | | | | ಗಂಡು | ಹೆಣ್ಣು | ಒಟ್ಟು | ಶಾಲೆ | ಕೊಠಡಿ | |
| 1 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾಶಾಲೆ ಅಶೋಕನಗರ-2 | 29150130601 | 32 | 32 | 64 | 1 | 1 | 1.25 |
| 2 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾ ಹೊಳೆಹೊನ್ನೂರು ಗಂ | 29150102501 | 93 | 0 | 93 | 1 | 2 | 2.5 |
| 3 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾ ಶಾಲೆ ಕಲ್ಲಿಹಾಳ್ | 29150104705 | 96 | 44 | 140 | 1 | 2 | 2.5 |
| 4 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಹಿಪ್ರಾ ಶಾಲೆ ಜಂಬರ್ ಘಟ್ಟ | 29150102701 | 39 | 17 | 56 | 1 | 2 | 2.5 |
| 5 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾಶಾಲೆ ಶ್ರೀನಿವಾಸಪುರ | 29150102901 | 9 | 10 | 19 | 1 | 1 | 1.25 |
| 6 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾ ಶಾಲೆ ದಪ್ಪರಹಟ್ಟಿ | 29150130101 | 27 | 29 | 56 | 1 | 1 | 1.25 |
| 7 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾ ಶಾಲೆ ತಟ್ಟೆಹಳ್ಳಿ ಕ್ಯಾಂಪ್ | 29150104902 | 21 | 20 | 41 | 1 | 1 | 1.25 |
| 8 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾ ಶಾಲೆ ಅರಕೆರೆಳಲು | 29150102905 | 62 | 56 | 118 | 1 | 1 | 1.25 |
| 9 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾ ಶಾಲೆ ಮಂಗೋಟೆ | 29150101402 | 31 | 43 | 74 | 1 | 1 | 1.25 |
| 10 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾಶಾಲೆ ಉರ್ದು ಕಲ್ಲೀಹಾಳ್ | 29150104701 | 147 | 90 | 237 | 1 | 1 | 1.25 |
| 11 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಜಂಬರಗಟ್ಟೆ | 29150102702 | 39 | 17 | 56 | 1 | 1 | 1.25 |
| 12 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾ ಶಾಲೆ ಕನಸಿನಕಟ್ಟೆ | 29150102301 | 34 | 37 | 71 | 1 | 2 | 2.50 |
| 13 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಭದ್ರಾಪುರ | 29150515003 | 50 | 53 | 103 | 1 | 4 | 5.00 |
| 14 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಹಕ್ಕಿ ಪಿಕ್ಕಿ ಕ್ಯಾಂಪ್ | 29150526901 | 82 | 89 | 171 | 1 | 3 | 3.75 |
| 15 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಕೂಡ್ಲಿ | 29150515002 | 34 | 17 | 51 | 1 | 3 | 3.75 |
| 16 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಹಾಡೋನಹಳ್ಳಿ | 29150512703 | 38 | 44 | 82 | 1 | 2 | 2.50 |
| 17 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಹೊಳೆಬೆಳಗಲು | 29150535001 | 19 | 28 | 47 | 1 | 2 | 2.50 |
| 18 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಹೊಯಸನಹಳ್ಳಿ | 29150527701 | 26 | 40 | 66 | 1 | 2 | 2.50 |
| 19 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಶಾಲೆ ಸೋಗಾನೆ | 29150520001 | 35 | 35 | 70 | 1 | 2 | 2.50 |
| 20 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಕಿಪ್ರಾಶಾಲೆ ಹೊಸಮನೆ ತಾಂಡ | 29150519504 | 5 | 9 | 14 | 1 | 2 | 2.50 |

| 21 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಹಾಯ ಹೊಳೆ(ಎಲ್.ಎಂ.ಎಸ್.ಎ) | 29150536501 | 157 | 133 | 290 | 1 | 2 | 2.50 |
|---|---|---|---|---|---|---|---|---|---|---|
| 2 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಮುದುವಾಲ | 29150505302 | 54 | 39 | 93 | 1 | 2 | 2.50 |
| 23 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಕೋಣಗವಳ್ಳಿ ತಾಂಡ | 29150505803 | 7 | 10 | 17 | 1 | 2 | 2.50 |
| 24 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ [illegible]ನಕೊಪ್ಪ | 29150510201 | 28 | 26 | 54 | 1 | 2 | 2.50 |
| 25 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಜಿಲಾಡಿಹಳ್ಳಿ | 29150525501 | 59 | 55 | 114 | 1 | 1 | 1.25 |
| 26 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಹೊಳೆಬೆನವಳ್ಳಿ | 29150527401 | 99 | 68 | 167 | 1 | 1 | 1.25 |
| 27 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಬಗನವಳ್ಳಿ ಹೊಸೂರು | 29150536505 | [illegible] | 22 | 43 | 1 | 1 | 1.25 |
| 28 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಬೇಡರಹೊಸಳ್ಳಿ | 29150514603 | 38 | 36 | 74 | 1 | 1 | 1.25 |
| 29 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಆಡಗಡಿ | 29150537901 | 9 | 16 | 25 | 1 | 1 | 1.25 |
| 30 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಹಳೆಮೊನ್ನಾಪುರ | 29150517302 | 4 | 11 | 15 | 1 | 1 | 1.25 |
| 31 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಸಾಟಕರ ಕ್ಯಾಂಪ್ | 29150516601 | 18 | 14 | 32 | 1 | 1 | 1.25 |
| 32 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಸೂಗೂರು ಕಾಲೋನಿ | 29150531501 | 11 | 10 | 21 | 1 | 1 | 1.25 |
| 33 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಚೋರಡಿ | 29150501101 | 46 | 64 | 110 | 1 | 1 | 1.25 |
| 34 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಹೊಳೆಹಟ್ಟಿ | 29150512903 | 36 | 35 | 71 | 1 | 2 | 2.50 |
| 35 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಅಬ್ಬಲಗೆರೆ | 29150513701 | 46 | 80 | 126 | 1 | 2 | 2.50 |
| 36 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಲಿಂಗಾಪುರ | 29150513001 | 15 | 14 | 29 | 1 | 2 | 2.50 |
| 37 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಚಿಕ್ಕಕೂಡಲಿ | 29150535301 | 10 | 6 | 16 | 1 | 2 | 2.50 |
| 38 | ಶಿವಮೊಗ್ಗ | ಶಿವಮೊಗ್ಗ ಗ್ರಾಮಾಂತರ | ಸಹಿಪ್ರಾಶಾಲೆ ಸುಪ್ಪುಕೋಟೆ ತಾಂಡ | 29150504106 | 8 | 5 | 13 | 1 | 2 | 2.50 |
| ಒಟ್ಟು | | | | | | | | 38 | 63 | |

ಉಪನಿರ್ದೇಶಕರ ಕಾರ್ಯಾಲಯ, ಸಾರ್ವಜನಿಕ ಶಿಕ್ಷಣ ಇಲಾಖೆ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

ಅನುಬಂಧ (ಸರ್ಕಾರಿ ಪ್ರೌಢ ಶಾಲೆ - ಪ್ರಥಮ ಪ್ರಾಶಸ್ತ್ಯ)

ನಮೂನೆ-1 ಅ

**2017-18ನೇ ಸಾಲಿಗೆ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಲಭ್ಯಗಳನ್ನು [ಶಿಥಿಲವಾದ ಕಟ್ಟಡ/ಕೊಠಡಿ ನೆಲಸಮಗೊಳಿಸಿ ಮರು ನಿರ್ಮಾಣ, ಹೆಚ್ಚುವರಿ ಕೊಠಡಿ, ದುರಸ್ತಿ, ಶೌಚಾಲಯ, ಕುಡಿಯುವ ನೀರು ವ್ಯವಸ್ಥೆ, ಆಟದ ಮೈದಾನ, ಕಾಂಪೌಂಡ್ ಹಾಗೂ ಇತರೆ ಸೌಲಭ್ಯಗಳು] ಒದಗಿಸಲು ಜಿಲ್ಲಾ ಉಪನಿರ್ದೇಶಕರು(ಆಡಳಿತ) ರವರಿಂದ ಸ್ವೀಕೃತವಾದ ಬೇಡಿಕೆ ಪ್ರಸ್ತಾವನೆಯ ಕ್ರಿಯಾ ಯೋಜನೆ ವಿವರ.**

| ಕ್ರ ಸಂ | ತಾಲ್ಲೂಕು | ವಿದಾನ ಸಬಾ ಕ್ಷೇತ್ರ | ಶಾಲೆಗಳ ಹೆಸರು | ಡೈಸ್ ಕೋಡ್ | ಒಟ್ಟು ಮಕ್ಕಳ ಸಂಖ್ಯೆ | | | ದುರಸ್ತಿ ಬೇಡಿಕೆ | | |
|---|---|---|---|---|---|---|---|---|---|---|
| | | | | | | | | ಭೌತಿಕ | | ಆರ್ಥಿಕ [ರೂ.ಲಕ್ಷಗಳಲ್ಲಿ] |
| | | | | | ಗಂಡು | ಹೆಣ್ಣು | ಒಟ್ಟು | ಶಾಲೆ | ಕೊಠಡಿ | |
| 1 | ಭದ್ರಾವತಿ | ಶಿವಮೊಗ್ಗ ಗ್ರಾಮಾಂತರ | ಸಪಪೂ ಕಾಲೇಜು (ಪ್ರೌ.ಶಾ.ವಿ) ಕಲ್ಲಿಹಾಳ್ | 29150104706 | 147 | 90 | 237 | 1 | 3 | 5 |

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 780
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್.
ಉತ್ತರಿಸುವ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿಯವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕು ಕೇಂದ್ರಗಳಲ್ಲಿ ಉತ್ತಮ ಸುಸಜ್ಜಿತವಾದ ಹೈಟೆಕ್ ಗ್ರಂಥಾಲಯಗಳು ಇಲ್ಲದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಈ ತಾಲ್ಲೂಕುಗಳು ಆಂಧ್ರಪ್ರದೇಶ ರಾಜ್ಯದ ಗಡಿಭಾಗವಾಗಿದ್ದು, ತೆಲುಗು ಭಾಷೆ ಪ್ರಾಬಲ್ಯವಿರುವುದರಿಂದ ಕನ್ನಡ ಜಾಗೃತಿ ಮೂಡಿಸಲು ಸುಸಜ್ಜಿತವಾದ ಹೈಟೆಕ್ ಗ್ರಂಥಾಲಯದ ಪ್ರಾರಂಭ ಮಾಡುವುದು ಅವಶ್ಯಕವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಇ) | ಹೊಸ ಗ್ರಂಥಾಲಯ ಪ್ರಾರಂಭಿಸುವುದಕ್ಕೆ ಇರುವ ಮಾನದಂಡಗಳೇನು; | ಸ್ಥಳೀಯ ಸಂಸ್ಥೆ (ಪುರಸಭೆ, ಪಟ್ಟಣ ಪಂಚಾಯತಿ) ವತಿಯಿಂದ ಉಚಿತವಾಗಿ ಮೂಲಭೂತ ಸೌಕರ್ಯಗಳು ಒಳಗೊಂಡಂತಹ ಉಚಿತ ಕಟ್ಟಡವನ್ನು ಗ್ರಂಥಾಲಯಕ್ಕಾಗಿ ಇಲಾಖೆಗೆ ಒದಗಿಸಿದಲ್ಲಿ ಸಾರ್ವಜನಿಕ ಓದುಗರ ಅವಶ್ಯಕತೆಗೆ ಅನುಗುಣವಾಗಿ ಹೊಸ ಗ್ರಂಥಾಲಯಗಳನ್ನು ಪ್ರಾರಂಭಿಸಿ ಸಾರ್ವಜನಿಕರಿಗೆ ಸೇವೆ ಒದಗಿಸಲಾಗುತ್ತದೆ. |
| ಈ) | ಬಾಗೇಪಲ್ಲಿ ಮತ್ತು ಗುಡಿಬಂಡೆ ತಾಲ್ಲೂಕುಗಳಲ್ಲಿ ಹೊಸ ಗ್ರಂಥಾಲಯಗಳನ್ನು ಯಾವಾಗ ಪ್ರಾರಂಭ ಮಾಡಲಾಗುವುದು? (ವಿವರ ಒದಗಿಸುವುದು) | ಬಾಗೇಪಲ್ಲಿ ಪುರಸಭೆ ವತಿಯಿಂದ ಹಾಗೂ ಗುಡಿಬಂಡೆ ಪಟ್ಟಣ ಪಂಚಾಯಿತಿ ವತಿಯಿಂದ ನೀಡಲಾಗಿರುವ ಉಚಿತ ಕಟ್ಟಡಗಳಲ್ಲಿ ಈಗಾಗಲೇ ಸಾರ್ವಜನಿಕ ಗ್ರಂಥಾಲಯಗಳು ಕಾರ್ಯನಿರ್ವಹಿಸುತ್ತಿರುತ್ತವೆ. ಸದರಿ ಸ್ಥಳಗಳಲ್ಲಿ ಮೂಲಭೂತ ಸೌಕರ್ಯಗಳು ಒಳಗೊಂಡಂತಹ ನೂತನ ಗ್ರಂಥಾಲಯ ಕಟ್ಟಡಗಳನ್ನು ನಿರ್ಮಾಣ ಮಾಡಲು ಸೂಕ್ತ ನಿವೇಶನಗಳನ್ನು ಒದಗಿಸುವಂತೆ ಪುರಸಭೆ/ಪಟ್ಟಣ ಪಂಚಾಯಿತಿಯಲ್ಲಿ ಪತ್ರ ವ್ಯವಹರಿಸಲಾಗಿದ್ದು, ಉಚಿತ ನಿವೇಶನ ಇಲಾಖೆಗೆ ದೊರೆತಲ್ಲಿ ಅನುದಾನದ ಲಭ್ಯತೆಗೆ ಅನುಸರಿಸಿ ಕೂಡಲೇ ನೂತನ ಗ್ರಂಥಾಲಯಗಳನ್ನು ನಿರ್ಮಾಣ ಮಾಡಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಇಡಿ 24 ಎಲ್‌ಬಿಎ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 324

ಸದಸ್ಯರ ಹೆಸರು : ಶ್ರೀ ಸಿದ್ದು ಸವದಿ (ತೇರದಾಳ)

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಸುಟ್ಟುಹೋದ ಟಿ.ಸಿ.ಗಳನ್ನು ಬದಲಾವಣೆ ಮಾಡುವಲ್ಲಿ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು; | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ (ಕೆ.ಇ.ಆರ್.ಸಿ.) ನಿಯಮಾನುಸಾರ ಗ್ರಾಮಾಂತರ ಪ್ರದೇಶದಲ್ಲಿ ವಿಫಲಗೊಂಡ ಕೃಷಿ ಪಂಪ್‌ಸೆಟ್‌ಗಳ ಪರಿವರ್ತಕಗಳನ್ನು 72 ಗಂಟೆಯೊಳಗೆ ಬದಲಾಯಿಸಲಾಗುತ್ತಿದೆ. ಕೆಲವೊಂದು ವೇಳೆ, ಹೆಚ್ಚಿನ ಮಳೆ-ಗಾಳಿಯಿಂದಾಗಿ ಪರಿವರ್ತಕಗಳು ಹೆಚ್ಚಿನ ಸಂಖ್ಯೆಯಲ್ಲಿ ವಿಫಲಗೊಂಡಾಗ, ಅವುಗಳನ್ನು ಬದಲಾಯಿಸಲು 2-3 ದಿನಗಳ ಹೆಚ್ಚಿನ ಕಾಲಾವಕಾಶ ಬೇಕಾಗಿರುತ್ತದೆ. |
| ಆ) | ರಾಜ್ಯದಲ್ಲಿ ಅಧಿಕೃತವಾಗಿರುವ ಪಂಪ್‌ಸೆಟ್‌ಗಳೆಷ್ಟು; ಅಕ್ರಮ ಪಂಪ್‌ಸೆಟ್ಟುಗಳನ್ನು ಸಕ್ರಮಗೊಳಿಸಲಾಗುವುದೇ; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯದಲ್ಲಿ 27,19,718 ಅಧಿಕೃತ ನೀರಾವರಿ ಪಂಪ್‌ಸೆಟ್‌ಗಳು ಮತ್ತು 4,66,855 ಅನಧಿಕೃತ ನೀರಾವರಿ ಪಂಪುಸೆಟ್‌ಗಳಿದ್ದು, ಅವುಗಳ ಜಿಲ್ಲಾವಾರು ವಿವರಗಳನ್ನು ಅನುಬಂಧ-1ರಲ್ಲಿ ನೀಡಿದೆ.<br>ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಕುರಿತು ಸರ್ಕಾರಿ ಸುತ್ತೋಲೆ ಸಂಖ್ಯೆ ಇನ್/41/ವಿಎಸ್‌ಸಿ/2014 ದಿನಾಂಕ 14/07/2014 ರಂದು ಸರ್ಕಾರಿ ಆದೇಶ ಹೊರಡಿಸಲಾಗಿದ್ದು ಸದರಿ ಸರ್ಕಾರಿ ಆದೇಶದಲ್ಲಿ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಒದಗಿಸುವಾಗ ಅಕ್ರಮ-ಸಕ್ರಮ ಹಾಗೂ ಹೊಸದಾಗಿ ನೋಂದಾಯಿಸಲ್ಪಡುವ ಪಂಪ್‌ಸೆಟ್‌ಗಳು ಎಂಬ ಭೇದವಿರದೇ ನೋಂದಾಯಿಸಲ್ಪಡುವ ಎಲ್ಲಾ ನೀರಾವರಿ ಪಂಪ್‌ಸೆಟ್‌ಗಳ ಅರ್ಜಿಗಳಿಗೆ ನಿಗದಿತ ಶುಲ್ಕ ಪಾವತಿಯನಂತರ ಜೇಷ್ಠತೆ ಆಧಾರದಮೇಲೆ ಮೂಲಭೂತ ಸೌಕರ್ಯ ಒದಗಿಸಲಾಗುತ್ತಿದೆ. |
| ಇ) | ರೈತರಿಗೆ ಹೆಚ್ಚುವರಿ ಟಿ.ಸಿ.ಗಳನ್ನು ನೀಡಲು ಇರುವ ಮಾನದಂಡಗಳೇನು; ಪ್ರತಿ ತಿಂಗಳು ಎಷ್ಟು ಹೆಚ್ಚುವರಿ ಟಿ.ಸಿ.ಗಳನ್ನು ನೀಡಲಾಗುವುದು; (ಜಿಲ್ಲಾವಾರು ಮಾಹಿತಿ ನೀಡುವುದು) | ರಾಜ್ಯ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ರೈತರು ತಮ್ಮ ಕೃಷಿ ಪಂಪ್‌ಸೆಟ್‌ಗೆ ವಿದ್ಯುತ್ ಸಂಪರ್ಕ ಕೋರಿ ಅರ್ಜಿ ಸಲ್ಲಿಸಿದಲ್ಲಿ ಸ್ಥಳ ಪರಿಶೀಲನೆ ನಡೆಸಿ, ಕಾರ್ಯಸಾಧ್ಯತೆ ಬಗ್ಗೆ ಪರಿಶೀಲಿಸಿ ಅವಶ್ಯವಿದ್ದಲ್ಲಿ ವಿದ್ಯುತ್ ಪರಿವರ್ತಕ ಅಳವಡಿಸಲು ನಿಯಮಾನುಸಾರ ಕ್ರಮಕೈಗೊಳ್ಳಲಾಗುವುದು. ವ್ಯವಸ್ಥೆ ಸುಧಾರಣೆ ಕಾಮಗಾರಿಗಳಡಿ ವೋಲ್ಟೇಜ್ ಸಮಸ್ಯೆ ಅಥವಾ ಹೆಚ್ಚುವರಿ ಹೊರೆ ಹೊಂದಿರುವ ವಿದ್ಯುತ್ ಪರಿವರ್ತಕಗಳಿಂದಾಗುವ ತೊಂದರೆ ನಿವಾರಿಸಲು ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುವುದು.<br>ರಾಜ್ಯದಲ್ಲಿ 2018-19ನೇ ಸಾಲಿನಲ್ಲಿ ಮಾಸಿಕ ಸರಾಸರಿ 5260 ಪರಿವರ್ತಕಗಳನ್ನು ಹೆಚ್ಚುವರಿಯಾಗಿ ಅಳವಡಿಸಿದ್ದು, ಜಿಲ್ಲಾವಾರು ವಿವರಗಳನ್ನು ಅನುಬಂಧ-2 ರಲ್ಲಿ ನೀಡಿದೆ. |
| ಈ) | ನಿರಂತರ ಜ್ಯೋತಿ ಯೋಜನೆಯ ನಿಯಮಗಳೇನು; ಯಾವ ಯಾವ ಪ್ರದೇಶಕ್ಕೆ ನಿರಂತರ ಜ್ಯೋತಿ ಯೋಜನೆಯಲ್ಲಿ ವಿದ್ಯುತ್ ಒದಗಿಸಲಾಗುವುದು; | ನಿರಂತರ ಜ್ಯೋತಿ ಯೋಜನೆಯು ರಾಜ್ಯದ ಮಹತ್ತರ ಯೋಜನೆಯಾಗಿದ್ದು, ಗ್ರಾಮಾಂತರ ಪ್ರದೇಶಗಳಲ್ಲಿನ ಕೃಷಿ ಮತ್ತು ಕೃಷಿಯೇತರ ಸ್ಥಾವರಗಳನ್ನು ಬೇರ್ಪಡಿಸಿ ಕೃಷಿಯೇತರ ಸ್ಥಾವರಗಳಿಗೆ ನಿರಂತರ ವಿದ್ಯುತ್ ಸೌಲಭ್ಯ ಕಲ್ಪಿಸಲಾಗುತ್ತಿದೆ. ಇದರಿಂದಾಗಿ ಗ್ರಾಮೀಣ ಪ್ರದೇಶದಲ್ಲಿರುವ ಕೃಷಿಯೇತರ ಸ್ಥಾವರಗಳಿಗೆ 24 ಗಂಟೆ ಗುಣಮಟ್ಟದ ನಿರಂತರ ವಿದ್ಯುತ್‌ನ್ನು ಮತ್ತು ರೈತರ ನೀರಾವರಿ ಪಂಪಸೆಟ್‌ಗಳಿಗೆ ನಿರ್ದಿಷ್ಟ ಅವಧಿಯ ಗುಣಮಟ್ಟದ ವಿದ್ಯುತ್‌ನ್ನು ಪೂರೈಸಬಹುದಾಗಿರುತ್ತದೆ.<br>ನಿರಂತರ ಜ್ಯೋತಿ ಯೋಜನೆಗೆ ಗ್ರಾಮಗಳನ್ನು ಆಯ್ಕೆ ಮಾಡುವಾಗ ಕೆಳಕಂಡ ನಿಯಮಗಳನ್ನು ಅನುಸರಿಸಲಾಗಿದೆ.<br>• ಆದ್ಯತೆ ಮೇಲೆ ಅತಿ ಹೆಚ್ಚು ನೀರಾವರಿ ಪಂಪ್ ಸೆಟ್‌ಗಳನ್ನು ಹೊಂದಿರುವ 11 ಕೆವಿ ವಿದ್ಯುತ್ ಮಾರ್ಗಗಳನ್ನು ಪರಿಗಣಿಸಲಾಗಿದೆ. |

| | | |
|---|---|---|
| | | ಆದ್ಯತೆ ಮೇಲೆ ಡಾ॥ ನಂಜುಂಡಪ್ಪ ಸಮಿತಿ ವರದಿ ಅನಸಾರವಾಗಿ ಅತಿ ಹಿಂದುಳಿದ ತಾಲ್ಲೂಕನ್ನು ಅಯ್ಕೆ ಮಾಡಲಾಗಿದೆ.<br>• ಆದ್ಯತೆ ಮೇಲೆ ಶೇಕಡ 30ರಷ್ಟು ನಷ್ಟ ಇದ್ದ ಮಾರ್ಗಗಳನ್ನು ಪರಿಗಣಿಸಲಾಗಿದೆ.<br><br>ನಿರಂತರ ಜ್ಯೋತಿ ಯೋಜನೆಯನ್ನು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ ಜಾರಿಗೊಳಿಸಿರುವುದಿಲ್ಲ. ಬದಲಾಗಿ ದೀನ್‌ದಯಾಳ್ ಉಪಾಧ್ಯಾಯ ಗ್ರಾಮ ಜ್ಯೋತಿ ಯೋಜನೆಯಡಿ ಫೀಡರ್ ಬೇರ್ಪಡಿಸುವಿಕೆ ಕಾಮಗಾರಿಯಲ್ಲಿ ನಿರಂತರ ವಿದ್ಯುತ್ ಪೂರೈಸಲು ಶಿವಮೊಗ್ಗ ವಲಯದಲ್ಲಿರುವ 130 ಗ್ರಾಮಾಂತರ ಫೀಡರ್‌ಗಳ ಕಾಮಗಾರಿಯು ಪ್ರಗತಿಯಲ್ಲಿರುತ್ತದೆ.<br>ಉಳಿದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ನಿರಂತರ ಜ್ಯೋತಿ ಯೋಜನೆಯನ್ನು ಒಟ್ಟು 3 ಹಂತಗಳಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ. ಎಲ್ಲಾ ಗ್ರಾಮೀಣ ಪ್ರದೇಶಗಳಿಗೆ ನಿರಂತರ ಜ್ಯೋತಿ ಯೋಜನೆಯನ್ನು ಹಂತ ಹಂತವಾಗಿ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. |
| ಉ) | ಸಾವಿರಾರು ಗುಂಪುಗಳಲ್ಲಿ ರೈತರು ಜಮೀನುಗಳಲ್ಲಿ ವಸತಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನಿರಂತರ ಜ್ಯೋತಿ ಅನುಷ್ಠಾನಗೊಂಡ ನಂತರ ಬೇರ್ಪಡೆಯಾದ ಐ.ಪಿ ಮಾರ್ಗಗಳಲ್ಲಿರುವ ಹೊಲಗದ್ದೆಗಳಲ್ಲಿ ಕುಟುಂಬ ಸಮೇತ ವಾಸ ಮಾಡುವ ಗ್ರಾಹಕರಿಗೆ ರಾತ್ರಿ ವೇಳೆಯಲ್ಲಿ ವಿದ್ಯುತ್ ಇಲ್ಲದ ತೊಂದರೆಯಾಗದಂತೆ. ಕೆಳಕಂಡಂತೆ ಕ್ರಮ ತೆಗೆದುಕೊಳ್ಳಲಾಗಿದೆ.<br><br>1. ಬೆಂಗಳೂರು ಮತ್ತು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಸದರಿ ಫೀಡರ್‌ಗಳಿಗೆ Over load protection relay ಮತ್ತು ಫೀಡರ್ ಪ್ಯಾನಲ್‌ಗಳನ್ನು ಅಳವಡಿಸುವ ಮೂಲಕ ರಾತ್ರಿಯ ವೇಳೆ ಸಹ ವಿದ್ಯುತ್ ಒದಗಿಸಲು ಕ್ರಮಗಳನ್ನು ಕೈಗೊಳ್ಳಲಾಗಿದೆ.<br>2. ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತದ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿಯಿಂದ ಬೇರ್ಪಡೆಗೊಂಡ ಐ.ಪಿ ಮಾರ್ಗಗಳಲ್ಲಿರುವ ಮನೆಗಳಲ್ಲಿ ವಾಸಿಸುತ್ತಿರುವ ಗ್ರಾಹಕರಿಗೆ 'ಓಪನ್ ಡೆಲ್ಟಾ' ಮೂಲಕ ರಾತ್ರಿಯ ವೇಳೆ ಸಹ ವಿದ್ಯುತ್ ಒದಗಿಸಲು ಕ್ರಮಗಳನ್ನು ಕೈಗೊಳ್ಳಲಾಗಿದೆ.<br>3. ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯ ಶಿವಮೊಗ್ಗ ವಲಯದಲ್ಲಿರುವ 11 ಕೆ.ವಿ. ಮಾರ್ಗಗಳಲ್ಲಿ ಹೆಚ್ಚಿನ ಎಲ್ಲಾ ಕೃಷಿಯೇತರ ಸ್ಥಾವರಗಳು ಬರುವಂತೆ ಪ್ರಸ್ತಾವನೆ ಇದ್ದು, ಹಾಗೂ ಪ್ರಸ್ತುತ ಕಾಮಗಾರಿಗಳು ಪ್ರಗತಿಯಲ್ಲಿರುವುದರಿಂದ, ಇಂತಹ ಸ್ಥಾವರಗಳಿದ್ದಲ್ಲಿ ಸಂದರ್ಭಾನುಸಾರವಾಗಿ ಕ್ರಮ ಕೈಗೊಳ್ಳಲಾಗುವುದು.<br><br>5. ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಯ ವ್ಯಾಪ್ತಿಯಲ್ಲಿ, ಹೊಲಗದ್ದೆಗಳಲ್ಲಿ ಕುಟುಂಬ ಸಮೇತ ವಾಸ ಮಾಡುವ ರೈತರಿಗೆ ರಾತ್ರಿ ವೇಳೆಯಲ್ಲಿ ವಿದ್ಯುತ್ ಇಲ್ಲದೆ ತೊಂದರೆಯಾಗುತ್ತಿರುವ ಪ್ರಕರಣಗಳು ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿಯ ಗಮನಕ್ಕೆ ಬಂದಿರುವುದಿಲ್ಲ. |
| ಊ) | ಹಾಗಿದ್ದಲ್ಲಿ, ಇವರುಗಳಿಗೆ, ಸದರಿ ಯೋಜನೆಯಲ್ಲಿ ವಿದ್ಯುತ್ ಒದಗಿಸಲಾಗುವುದೇ? | |

ಸಂಖ್ಯೆ: ಇಎನ್ 18 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸಿದ್ದು ಸವದಿ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 324ಕ್ಕೆ ಅನುಬಂಧ-1

ಡಿಸೆಂಬರ್-2018ರ ಅಂತ್ಯಕ್ಕೆ ರಾಜ್ಯದಲ್ಲಿರುವ ಅಧಿಕೃತ ಮತ್ತು ಅನಧಿಕೃತ ನೀರಾವರಿ ಪಂಪುಸೆಟ್‌ಗಳ ಜಿಲ್ಲಾವಾರು ವಿವರಗಳು

| ಕ್ರ. ಸಂ. | ಜಿಲ್ಲೆಗಳ ಹೆಸರು | ಅಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಂಖ್ಯೆ | ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಂಖ್ಯೆ |
|---|---|---|---|
| | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | | |
| 1 | ಬೆಂಗಳೂರು ನಗರ | 32,274 | 1,024 |
| 2 | ಬೆಂಗಳೂರು ಗ್ರಾಮಾಂತರ | 70,573 | 4,468 |
| 3 | ರಾಮನಗರ | 85,261 | 4,338 |
| 4 | ತುಮಕೂರು | 2,50,868 | 28,194 |
| 5 | ಕೋಲಾರ | 99,600 | 10,917 |
| 6 | ಚಿಕ್ಕಬಳ್ಳಾಪುರ | 97,667 | 4,379 |
| 7 | ದಾವಣಗೆರೆ | 1,34,990 | 21,620 |
| 8 | ಚಿತ್ರದುರ್ಗ | 1,24,083 | 26,574 |
| | **ಬೆಸ್ಕಾಂ ಒಟ್ಟು** | **8,95,316** | **1,01,514** |
| | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | | |
| 1 | ದಕ್ಷಿಣ ಕನ್ನಡ | 1,07,480 | 0 |
| 2 | ಉಡುಪಿ | 70,944 | 0 |
| 3 | ಶಿವಮೊಗ್ಗ | 81,167 | 50,622 |
| 4 | ಚಿಕ್ಕಮಗಳೂರು | 57,551 | 44,968 |
| | **ಮೆಸ್ಕಾಂ ಒಟ್ಟು** | **3,17,142** | **95,590** |
| | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | | |
| 1 | ಮೈಸೂರು | 99,919 | 13,012 |
| 2 | ಚಾಮರಾಜನಗರ | 58,476 | 5,113 |
| 3 | ಮಂಡ್ಯ | 1,00,628 | 24,414 |
| 4 | ಹಾಸನ | 1,09,161 | 23,721 |
| 5 | ಕೊಡಗು | 11,823 | 0 |
| | **ಸೆಸ್ಕ್ ಒಟ್ಟು** | **3,80,007** | **66,260** |
| | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ (6-2-2019 ರಲ್ಲಿದ್ದಂತೆ) | | |
| 1 | ಧಾರವಾಡ | 29,104 | 1,624 |
| 2 | ಗದಗ | 39,537 | 4,353 |
| 3 | ಹಾವೇರಿ | 79,829 | 7,811 |
| 4 | ಉತ್ತರ ಕನ್ನಡ | 66,837 | 3,643 |
| 5 | ಬಾಗಲಕೋಟೆ | 1,25,218 | 30,124 |
| 6 | ಬೆಳಗಾವಿ | 2,97,065 | 55,981 |
| 7 | ಬಿಜಾಪುರ | 1,37,158 | 35,921 |
| | **ಹೆಸ್ಕಾಂ ಒಟ್ಟು** | **7,72,799** | **1,39,457** |
| | ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ | | |
| 1 | ಕಲಬುರಗಿ | 69,435 | 11,456 |
| 2 | ಯಾದಗಿರಿ | 30,492 | 8,788 |
| 3 | ಬೀದರ್ | 66,384 | 10,946 |
| 4 | ರಾಯಚೂರು | 50,072 | 13,116 |
| 5 | ಕೊಪ್ಪಳ | 61,333 | 11,885 |
| 6 | ಬಳ್ಳಾರಿ | 76,738 | 7,843 |
| | **ಜೆಸ್ಕಾಂ ಒಟ್ಟು** | **3,54,454** | **64,034** |
| | ರಾಜ್ಯದ ಒಟ್ಟು | 27,19,718 | 4,66,855 |

ವಿಧಾನ ಸಭೆಯ ಮಾನ್ಯ ಸದಸ್ಯರಾದ ಶ್ರೀ ಸಿದ್ದು ಸವದಿ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 324ಕ್ಕೆ ಅನುಬಂಧ-2

**2018-19ನೇ ಸಾಲಿನಲ್ಲಿ ಮಾಸಿಕ ಸರಾಸರಿ ಹೆಚ್ಚುವರಿಯಾಗಿ ಅಳವಡಿಸಿದ ಪರಿವರ್ತಕಗಳ ಜಿಲ್ಲಾವಾರು ವಿವರಗಳು**

| ಕ್ರ ಸಂ. | ಜಿಲ್ಲೆಗಳ ಹೆಸರು | ಮಾಸಿಕ ಸರಾಸರಿ ಹೆಚ್ಚುವರಿವಾಗಿ ಅಳವಡಿಸಿದ ಪರಿವರ್ತಕಗಳ ಸಂಖ್ಯೆ |
|---|---|---|
| | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | |
| 1 | ಬೆಂಗಳೂರು ನಗರ | 13 |
| 2 | ಬೆಂಗಳೂರು ಗ್ರಾಮಾಂತರ | 104 |
| 3 | ರಾಮನಗರ | 566 |
| 4 | ತುಮಕೂರು | 1130 |
| 5 | ಕೋಲಾರ | 146 |
| 6 | ಚಿಕ್ಕಬಳ್ಳಾಪುರ | 257 |
| 7 | ದಾವಣಗೆರೆ | 414 |
| 8 | ಚಿತ್ರದುರ್ಗ | 420 |
| | ಬೆಸ್ಕಾಂ ಒಟ್ಟು | 3050 |
| | ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | |
| 1 | ದಕ್ಷಿಣ ಕನ್ನಡ | 80 |
| 2 | ಉಡುಪಿ | 30 |
| 3 | ಶಿವಮೊಗ್ಗ | 260 |
| 4 | ಚಿಕ್ಕಮಗಳೂರು | 130 |
| | ಮೆಸ್ಕಾಂ ಒಟ್ಟು | 500 |
| | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ | |
| 1 | ಮೈಸೂರು | 240 |
| 2 | ಚಾಮರಾಜನಗರ | 110 |
| 3 | ಮಂಡ್ಯ | 225 |
| 4 | ಹಾಸನ | 260 |
| 5 | ಕೊಡಗು | 25 |
| | ಸೆಸ್ಕ್ ಒಟ್ಟು | 840 |
| | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | |
| 1 | ಧಾರವಾಡ | 2 |
| 2 | ಗದಗ | 33 |
| 3 | ಹಾವೇರಿ | 21 |
| 4 | ಉತ್ತರ ಕನ್ನಡ | 40 |
| 5 | ಬಾಗಲಕೋಟೆ | 6 |
| 6 | ಬೆಳಗಾವಿ | 104 |
| 7 | ಬಿಜಾಪುರ | 26 |
| | ಹೆಸ್ಕಾಂ ಒಟ್ಟು | 232 |
| | ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ | |
| 1 | ಕಲಬುರಗಿ | 77 |
| 2 | ಯಾದಗಿರಿ | 93 |
| 3 | ಬೀದರ್ | 72 |
| 4 | ರಾಯಚೂರು | 80 |
| 5 | ಕೊಪ್ಪಳ | 161 |
| 6 | ಬಳ್ಳಾರಿ | 175 |
| | ಜೆಸ್ಕಾಂ ಒಟ್ಟು | 638 |
| | ರಾಜ್ಯದ ಒಟ್ಟು | 5260 |

# ಕರ್ನಾಟಕ ವಿಧಾನಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 846 |
| 2) | ಸದಸ್ಯರ ಹೆಸರು | : | ಶ್ರೀ ಬಸವರಾಜ ಬಿ.ಮತ್ತಿಮುಡ |
| 3) | ಉತ್ತರಿಸಬೇಕಾದ ದಿನಾಂಕ | : | 12.02.2019 |
| 4) | ಉತ್ತರಿಸುವ ಸಚಿವರು | : | ಸನ್ಮಾನ್ಯ ಮುಖ್ಯಮಂತ್ರಿಯವರು |

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಕಳೆದ ಮೂರು ವರ್ಷಗಳಲ್ಲಿ ಬಿಡುಗಡೆಯಾದ ಅನುದಾನವೆಷ್ಟು; ಬಿಡುಗಡೆಯಾಗದೆ ಇರುವ ಅನುದಾನವೆಷ್ಟು (ವರ್ಷವಾರು ಸಂಪೂರ್ಣ ಮಾಹಿತಿ ಒದಗಿಸುವುದು)</td><td>ಕಳೆದ ಮೂರು ವರ್ಷಗಳಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಬಿಡುಗಡೆ ಮಾಡಲಾದ ಅನುದಾನ ವಿವರಗಳು:<br>(ರೂ.ಕೋಟಿಗಳಲ್ಲಿ)
<table>
<tr><th>ಕ್ರ. ಸಂ.</th><th>ವರ್ಷ</th><th>ನಿಗದಿಯಾದ ಅನುದಾನ</th><th>ಪರಿಷ್ಕೃತ ಅಂದಾಜು</th><th>ಬಿಡುಗಡೆಯಾದ ಅನುದಾನ</th></tr>
<tr><td>1</td><td>2015–16</td><td>1000.00</td><td>750.00</td><td>750.00</td></tr>
<tr><td>2</td><td>2016–17</td><td>1000.00</td><td>750.00</td><td>750.00</td></tr>
<tr><td>3</td><td>2017–18</td><td>1000.00</td><td>800.00</td><td>800.00</td></tr>
</table>
ಸಾಮಾನ್ಯವಾಗಿ ತ್ರೈಮಾಸಿಕ ಕಂತಿನವರೆಗೆ ಅನುದಾನವನ್ನು ಬಿಡುಗಡೆಗೊಳಿಸುತ್ತಿದ್ದು, ಒಟ್ಟು ಬಿಡುಗಡೆಯಾದ ಮೊತ್ತದ ಶೇಕಡ 75ರಷ್ಟು ವೆಚ್ಚವಾಗಿದ್ದಲ್ಲಿ ನಾಲ್ಕನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಲಾಗುತ್ತಿದೆ. ಆದರೆ ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿಯು ಶೇ.75 ರಷ್ಟು ವೆಚ್ಚವನ್ನು ಮಾಡದೇ ಇರುವುದರಿಂದ ನಾಲ್ಕನೇ ಕಂತು ಸಿಕ್ಕಿರುವುದಿಲ್ಲ/ಬಿಡುಗೊಳಿಸಿರುವುದಿಲ್ಲ.</td></tr>
<tr><td>ಆ</td><td>ಬಾಕಿ ಇರುವ ಅನುದಾನವನ್ನು ಎಷ್ಟು ದಿನಗಳ ಕಾಲವಕಾಶದಲ್ಲಿ ಬಿಡುಗಡೆ ಮಾಡಲಾಗುವುದು:</td><td>ಆರ್ಥಿಕ ಇಲಾಖೆಯು ಆಯಾ ವರ್ಷಾಂತ್ಯಕ್ಕೆ ಪರಿಷ್ಕೃತ ಅಂದಾಜನ್ನು ಅಂತಿಮಗೊಳಿಸಿರುವ ಹಿನ್ನೆಲೆಯಲ್ಲಿ ಮುಂದಿನ ಕಂತಿನ ಅನುದಾನ ಬಿಡುಗಡೆ ಮಾಡುವ ಪ್ರಶ್ನೆಯು ಉದ್ಭವಿಸುವುದಿಲ್ಲ.</td></tr>
<tr><td>ಇ</td><td>ಬಿಡುಗಡೆಯಾದ ಅನುದಾನದಲ್ಲಿ ಕಲಬುರಗಿ ಗ್ರಾಮೀಣ ಮತಕ್ಷೇತ್ರಕ್ಕೆ ನೀಡಿರುವ ಅನುದಾನವೆಷ್ಟು; ಇದರಲ್ಲಿ ಕೈಗೊಂಡ ಕಾಮಗಾರಿ ಗಳು ಯಾವುವು (ಪೂರ್ಣ ಮಾಹಿತಿ ನೀಡುವುದು)</td><td>ಹೈದ್ರಾಬಾದ್ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯ ಅನುದಾನವು ಡಾ: ನಂಜುಂಡಪ್ಪ ವರದಿ ಅನುಸಾರ CDI ಸೂಚ್ಯಾಂಕ ಆಧಾರದ ಮೇಲೆ ತಾಲೂಕವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ತಾಲೂಕವಾರು ಅನುದಾನ ಹಂಚಿಕೆ ಮಾಡುತ್ತಿರುವುದರಿಂದ ವಿಧಾನ ಸಭಾ ಕ್ಷೇತ್ರವಾರು ಅನುದಾನ ಹಂಚಿಕೆ ಮಾಡಿರುವುದಿಲ್ಲ. ತಾಲ್ಲೂಕುವಾರು ಕಾಮಗಾರಿಗಳ ಮಾಹಿತಿಯನ್ನು ಮಂಡಳಿಯ ವೆಬ್‌ಸೈಟ್ www.hkrdb.kar.nic.in ನಲ್ಲಿ ವಿಕ್ಷಿಸುವುದು.</td></tr>
<tr><td>ಈ</td><td>ಪ್ರಸ್ತುತ ಸಾಲಿನಲ್ಲಿ ಕೈಗೊಳ್ಳಲಿರುವ ಕಾಮಗಾರಿಗಳು ಯಾವುವು; ಕಾಮಗಾರಿಗಳು ಯಾವ ಹಂತದಲ್ಲಿದೆ (ಸಂಪೂರ್ಣ ಮಾಹಿತಿ ಒದಗಿಸುವುದು)</td><td>2018–19ನೇ ಸಾಲಿನಲ್ಲಿ ಮಂಡಳಿಯಿಂದ ಅನುಮೋದಿತ ತಾಲ್ಲೂಕುವಾರು ಕಾಮಗಾರಿಗಳ ವಿವರಗಳನ್ನು ಮಂಡಳಿಯ ವೆಬ್‌ಸೈಟ್ www.hkrdb.kar.nic.in ನಲ್ಲಿ ವಿಕ್ಷಿಸುವುದು.</td></tr>
</table>

**ಸಂಖ್ಯೆ: ಯೋಇ 03 ಹೈಕವಿ 2019**

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 591 |
| ಸದಸ್ಯರ ಹೆಸರು : | ಶ್ರೀಮತಿ. ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ) |
| ಉತ್ತರಿಸಬೇಕಾದ ದಿನಾಂಕ: | 12.02.2019. |
| ಉತ್ತರಿಸುವ ಸಚಿವರು : | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಅತ್ಯಂತ ವೇಗವಾಗಿ ಅಭಿವೃದ್ಧಿಯಾಗುತ್ತಿರುವ ಹಾಗೂ ಗಡಿಭಾಗದ ಅಂಚಿನಲ್ಲಿರುವ ಕಾರವಾರದಲ್ಲಿ ಮರಳಿನ ಕೊರತೆ ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ.<br>ಉತ್ತರ ಕನ್ನಡ ಜಿಲ್ಲೆಯ ಕರಾವಳಿ ನಿಯಂತ್ರಣ ವಲಯವಲ್ಲದ ವ್ಯಾಪ್ತಿಯಲ್ಲಿ ಬರುವ ನದಿ ಪಾತ್ರಗಳಲ್ಲಿ ಮರಳಿನ ನಿಕ್ಷೇಪಗಳು ಸೂಕ್ಷ್ಮ ವಲಯ ಪ್ರದೇಶಗಳಲ್ಲಿ ಬರುತ್ತಿರುವುದರಿಂದ ಹಾಗೂ ನದಿಗಳು ಯಾವಾಗಲು ನೀರಿನಿಂದ ತುಂಬಿ ಹರಿಯುತ್ತಿರುವ ಕಾರಣ ಮರಳು ನಿಕ್ಷೇಪಗಳನ್ನು ಗುರುತಿಸಲು ಸಾಧ್ಯವಾಗಿರುವುದಿಲ್ಲ.<br>ಕರಾವಳಿ ನಿಯಂತ್ರಣ ವಲಯದ ನದಿ ಪಾತ್ರದಲ್ಲಿ ಭಾರತ ಸರ್ಕಾರದ CZMP ನಕ್ಷೆಯನ್ವಯ ಉತ್ತರ ಕನ್ನಡ ಜಿಲ್ಲೆಯ ಗಂಗಾವಳಿ-01, ಶರಾವತಿ-03 ಮತ್ತು ಕಾಳಿ ನದಿ ಪಾತ್ರದಲ್ಲಿ 05 ಮರಳು ದಿಬ್ಬಗಳನ್ನು ಗುರುತಿಸಲಾಗಿರುತ್ತದೆ. ಆದರೆ, ಸದರಿ ಮರಳು ದಿಬ್ಬಗಳು ESA (Ecological Sensitive Area), ಕಾಂಡ್ಲಾ ವನ ಹಾಗೂ ಮೀನು ಮರಿ ಉತ್ಪಾದಿಸುವ ಪ್ರದೇಶವೆಂದು ಪರಿಗಣಿಸಿರುವುದರಿಂದ, ಸದರಿ ಮರಳು ದಿಬ್ಬಗಳಿಂದ ಮರಳು ತೆರವುಗೊಳಿಸಲು ಅನುಮತಿಯನ್ನು ನೀಡಿರುವುದಿಲ್ಲ. ತತ್ಸಂಬಂಧ ಕಾಳಿ ನದಿಗೆ ಹೊಂದಿಕೊಂಡಂತಿರುವ ಕಾರವಾರ ಪಟ್ಟಣದಲ್ಲಿ ಮರಳಿನ ಕೊರತೆ ತಾತ್ಕಾಲಿಕವಾಗಿ ಉಂಟಾಗಿರುತ್ತದೆ.<br>2018-19ನೇ ಸಾಲಿನಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿನ ಕರಾವಳಿ ನದಿ ಪಾತ್ರಗಳಾದ ಕಾಳಿ-05, ಗಂಗಾವಳಿ-02, ಅಘನಾಶಿನಿ-5, ಶರಾವತಿ-5 **ಒಟ್ಟು 16** ಮರಳು ದಿಬ್ಬಗಳನ್ನು ಗುರುತಿಸಿ **11,76,867 ಮೆ.ಟನ್** ಪ್ರಮಾಣಕ್ಕೆ KSCZMAಯಿಂದ ನಿರಾಕ್ಷೇಪಣಾ ಕೋರಲಾಗಿತ್ತು.<br>KSCZMAಯಿಂದ ಗಂಗಾವಳಿ-01, ಅಘನಾಶಿನಿ-5, ಶರಾವತಿ-2 **ಒಟ್ಟು 08 ಮರಳು ದಿಬ್ಬಗಳಲ್ಲಿ ಒಟ್ಟು 441,664 ಮೆ.ಟನ್** ಪ್ರಮಾಣದ ಮರಳನ್ನು ತೆರವುಗೊಳಿಸಲು ಅನುಮತಿ |
| ಆ) | ತೀವ್ರವಾಗಿರುವ ಮರಳಿನ ಸಮಸ್ಯೆಯನ್ನು ಬಗೆಹರಿಸುವುದಾಗಿ ಮಾನ್ಯ ಸಚಿವರು ತಿಳಿಸಿದ್ದು, ಇದುವರೆಗೂ ಬಗೆಹರಿಸದೇ ಇರುವುದಕ್ಕೆ ಕಾರಣವೇನು; | |

--2

| | | |
|---|---|---|
| | | ದೊರೆತಿದ್ದು, ಅದರಂತೆ ಜಿಲ್ಲೆಯಲ್ಲಿ ಒಟ್ಟು **88** ತಾತ್ಕಾಲಿಕ ಮರಳು ಪರವಾನಿಗೆದಾರರಿಂದ ಸಾಂಪ್ರದಾಯಿಕ ರೀತಿಯಲ್ಲಿ ಮರಳು ತೆಗೆದು ಸಾಗಾಣಿಕೆ ಮಾಡಲು ಅನುಮತಿ ನೀಡಲಾಗಿದ್ದು, ಡಿಸೆಂಬರ್ ಅಂತ್ಯದವರೆಗೆ **2,15,606 ಮೆ.ಟನ್** ಮರಳನ್ನು ತೆಗೆದು ಜಿಲ್ಲೆಯಲ್ಲಿನ ಸರ್ಕಾರಿ ಮತ್ತು ಸಾರ್ವಜನಿಕ ಕಾಮಗಾರಿಗಳಿಗೆ ಮರಳನ್ನು ಸರಬರಾಜು ಮಾಡಲಾಗಿರುತ್ತದೆ. |
| ಇ) | ಮರಳಿನ ಸಮಸ್ಯೆಯನ್ನು ಯಾವಾಗ ಬಗೆಹರಿಸಲಾಗುವುದು (ಸಂಪೂರ್ಣ ವಿವರ ನೀಡುವುದು) ? | ಕೇಂದ್ರ ಸರ್ಕಾರದ CZMP ನಕ್ಷೆಯಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿನ ಕಾಳಿ, ಗಂಗಾವಳಿ ಹಾಗೂ ಶರಾವತಿ ನದಿಗಳನ್ನು ESA, CVC (Critical Vulnerable Area) ಹಾಗೂ ಮೀನು ಮರಿ ಉತ್ಪಾದಿಸುವ ಪ್ರದೇಶವೆಂದು ಪರಿಗಣಿಸಿರುವುದರಿಂದ ಸದರಿ ನದಿಗಳ ವ್ಯಾಪ್ತಿಯಲ್ಲಿ ಮರಳು ತೆಗೆಯಲು ಸಾಧ್ಯವಿರುವುದಿಲ್ಲ. ಆದಾಗ್ಯೂ, CRZ ಕಚೇರಿ, ಕಾರವಾರ ಜಿಲ್ಲೆಯಿಂದ ಇವುಗಳನ್ನು ಪುನಃ ಪರಿಶೀಲಿಸಲು ಪ್ರಸ್ತಾವನೆಯನ್ನು MOEF ಬೆಂಗಳೂರಿಗೆ ಕಳುಹಿಸಲಾಗಿದೆ. MOEF ಕಚೇರಿ ಬೆಂಗಳೂರು ರವರಿಂದ ಅನುಮತಿ ದೊರೆತ ನಂತರ ಜಿಲ್ಲೆಯಲ್ಲಿ ಮರಳು ದಿಬ್ಬಗಳಿಂದ ಮರಳನ್ನು ತೆರವುಗೊಳಿಸಲು ಅನುಮತಿ ನೀಡಲಾಗುವುದು. |

ಸಿಐ 54 ಎಂಎಂಎನ್ 2019

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು.

# ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿನ/ಗುರುತಿಲ್ಲದ ಪ್ರಶ್ನೆ ಸಂಖ್ಯೆ : 34

2) ಸದಸ್ಯರ ಹೆಸರು : ಶ್ರೀ ರಾಜಕುಮಾರ ಪಾಟೀಲ್

3) ಉತ್ತರಿಸಬೇಕಾದ ದಿನಾಂಕ : 12.02.2019

4) ಉತ್ತರಿಸವ ಸಚಿವರು : ಸನ್ಮಾನ್ಯ ಮುಖ್ಯಮಂತ್ರಿಯವರು

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಕಳೆದ ಮೂರು ವರ್ಷಗಳಿಂದ ಸೇಡಂ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಹೈದ್ರಾಬಾದ್ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಎಷ್ಟು ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ.</td><td>ಹೈದ್ರಾಬಾದ ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಳಿಯ ಅನುದಾನವು ಡಾ: ನಂಜುಂಡಪ್ಪಾ ವರದಿ ಅನುಸಾರ CDI ಸೂಚ್ಯಾಂಕ ಆಧಾರದ ಮೇಲೆ ತಾಲ್ಲೂಕವನ್ನು ಒಂದು ಘಟಕವನ್ನಾಗಿ ಪರಿಗಣಿಸಿ ತಾಲೂಕವಾರು ಅನುದಾನ ಹಂಚಿಕೆ ಮಾಡುತ್ತಿರುವುದರಿಂದ ವಿಧಾನ ಸಭಾ ಕ್ಷೇತ್ರವಾರು ಅನುದಾನ ಹಂಚಿಕೆ ಮಾಡಿರುವುದಿಲ್ಲ. ಕಳೆದ ಮೂರು ವರ್ಷಗಳಲ್ಲಿ ಅಂದರೆ, 2016-17, 2017-18 & 2018-19 ನೇ ಸಾಲಿನ ಸೇಡಂ ತಾಲೂಕಿಗೆ ಮಂಡಳಿಯ ವೆಬ್‌ಸೈಟ್‌ದಲ್ಲಿರುವಂತೆ ಒಟ್ಟು 500 ಕಾಮಗಾರಿಗಳನ್ನು ತೆಗೆದುಕೊಳ್ಳಲಾಗಿದೆ. ವರ್ಷವಾರು ಕಾಮಗಾರಿಗಳ ಪ್ರಗತಿ ವರದಿಯನ್ನು ಮಂಡಳಿಯ ವೆಬ್‌ಸೈಟ್ www.hkrdb.kar.nic.in ನಲ್ಲಿ ವಿಕ್ಷಿಸಬಹುದಾಗಿದೆ.</td></tr>
<tr><td>ಆ</td><td>ಪ್ರಸ್ತುತ ಈ ಕಾಮಗಾರಿಗಳು ಯಾವ ಹಂತದಲ್ಲಿವೆ:</td><td>ಮಂಡಳಿಯ ವೆಬ್‌ಸೈಟ್‌ದಲ್ಲಿರುವಂತೆ ಕಾಮಗಾರಿಗಳ ವಿವರ ಈ ಕೆಳಕಂಡಂತಿದೆ.
<table>
<tr><th>Year</th><th>Taluka</th><th>Total Works</th><th>Completed</th><th>Under progress</th><th>Not started</th></tr>
<tr><td>2016-17</td><td>ಸೇಡಂ</td><td>117</td><td>89</td><td>27</td><td>01</td></tr>
<tr><td>2017-18</td><td>ಸೇಡಂ</td><td>218</td><td>97</td><td>111</td><td>10</td></tr>
<tr><td>2018-19</td><td>ಸೇಡಂ</td><td>165</td><td>0</td><td>38</td><td>127</td></tr>
<tr><td colspan="2">ಒಟ್ಟು</td><td>500</td><td>186</td><td>176</td><td>138</td></tr>
</table>
ತಾಲೂಕವಾರು ಕಾಮಗಾರಿಗಳ ಪ್ರಗತಿಯನ್ನು www.hkrdb.kar.nic.in ನಲ್ಲಿ ವಿಕ್ಷಿಸಬಹುದಾಗಿದೆ.</td></tr>
<tr><td>ಇ</td><td>ಕಾಮಗಾರಿಗಳನ್ನು ಕೈಗೊಂಡಿದ್ದಲ್ಲಿ ಯಾವ ಕಾಲಮಿತಿಗೊಳಗೆ ಪೂರ್ಣಗೊಳಿಸಲು ಸರ್ಕಾರವು ಯೋಜನೆ ರೂಪಿಸಿದೆ</td><td>ಕಾಮಗಾರಿಗಳನ್ನು ಕಾಲಮಿತಿಯಲ್ಲಿ ಪೂರ್ಣಗೊಳಿಸಲು ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳೊಂದಿಗೆ ಮತ್ತು ಅನುಷ್ಠಾನ ಇಲಾಖಾಧಿಕಾರಿಗಳೊಂದಿಗೆ 4-5 ಸುತ್ತಿನ ಸಭೆಗಳನ್ನು ಕೈಗೊಳ್ಳಲಾಗಿದ್ದು, ಕಾಲಮಿತಿಯೊಳಗಾಗಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಎಲ್ಲಾ ಅನುಷ್ಠಾನ ಇಲಾಖಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆಗಳನ್ನು ನೀಡಲಾಗಿದೆ.</td></tr>
</table>

**ಸಂಖ್ಯೆ: ಯೋಇ 02 ಹೈಕಕವಿ 2019**

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 768
2. ಸದಸ್ಯರ ಹೆಸರು : ಶ್ರೀ ಅರವಿಂದ ಚಂದ್ರಕಾಂತ ಬೆಲ್ಲದ್ (ಹುಬ್ಬಳ್ಳಿ-ಧಾರವಾಡ ಪಶ್ಚಿಮ)
3. ಉತ್ತರಿಸುವ ದಿನಾಂಕ : 12.02.2019
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ಹುಬ್ಬಳ್ಳಿಯಲ್ಲಿ ಕೆ.ಐ.ಎ.ಡಿ.ಬಿ.ಯಿಂದ ಫರ್ ಪೋರ್ಟ್ ದೇಶಪಾಂಡೆ ಫೌಂಡೇಷನ್, ಇನ್ಫೋಸಿಸ್ ಕಂಪನಿಗಳಿಗೆ ಭೂಮಿಯನ್ನು ಸ್ವಾಧೀನ ಪಡಿಸಿಕೊಂಡಿದ್ದು, ಭೂಮಿ ಕಳೆದುಕೊಂಡ ರೈತ ಕುಟುಂಬದವರಿಗೆ / ರೈತರ ಮಕ್ಕಳಿಗೆ ಎಷ್ಟು ಉದ್ಯೋಗಗಳನ್ನು ಆ ಕಂಪನಿಗಳಲ್ಲಿ ನೀಡಲಾಗಿದೆ; ಉದ್ಯೋಗ ನೀಡಲು ಇರುವ ಮಾನದಂಡಗಳೇನು; | ಹುಬ್ಬಳ್ಳಿ ವಿಮಾನ ನಿಲ್ದಾಣದ ಯೋಜನೆಗಾಗಿ 710-37 ಎಕರೆ ಜಮೀನನ್ನು ಭೂಸ್ವಾಧೀನಪಡಿಸಿ, ಈ ಪೈಕಿ 694-05 ಎಕರೆ ಜಮೀನು ವಿವಿಧ ದಿನಾಂಕಗಳಂದು ಕಲಂ 28(8)ರಡಿ ಮಂಡಳಿಗೆ ಹಸ್ತಾಂತರವಾಗಿದ್ದು, ಈ ಜಮೀನಿನಲ್ಲಿ ಸ್ಥಾಪನೆಯಾದ ಕಂಪನಿಗಳ ಪೈಕಿ ದೇಶಪಾಂಡೆ ಫೌಂಡೇಷನ್, ಇನ್ಫೋಸಿಸ್ ಕಂಪನಿಗಳು ಕೆ.ಐ.ಎ.ಡಿ.ಬಿ.ಯೊಂದಿಗೆ ಮಾಡಿಕೊಂಡ ಕರಾರು ಪತ್ರದಲ್ಲಿನ ನಿಬಂಧನೆ 20(ಸಿ)ರಲ್ಲಿ ಈ ಕೆಳಕಂಡಂತೆ ಉಲ್ಲೇಖಿಸಲಾಗಿದೆ:-<br><br>20(c) The Lessee, in employing skilled and unskilled labour, in the Industrial Units to be established in the schedule property, shall as for as possible give preference to the member of families of the land owners whose land have been acquired for the purpose of formation of Industrial Areas subject to the eligibility as per qualifications prescribed for the job. |
| ಆ. | ಭೂಮಿ ಕಳೆದುಕೊಂಡ ರೈತರಿಗೆ / ಕುಟುಂಬದವರಿಗೆ ಉದ್ಯೋಗ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಸರ್ಕಾರ ಈ ಕಂಪನಿಗಳ ವಿರುದ್ಧ ಯಾವ ಕ್ರಮ ಕೈಗೊಂಡಿದೆ; (ಸಂಪೂರ್ಣ ಮಾಹಿತಿ ನೀಡುವುದು) | ದೇಶಪಾಂಡೆ ಫೌಂಡೇಷನ್ ಸಂಸ್ಥೆಯು ತರಬೇತಿ ನೀಡುವ ಸಂಸ್ಥೆಯಾಗಿದ್ದು, ಯಾವುದೇ ಉದ್ಯೋಗ ನೀಡಿರುವುದಿಲ್ಲ.<br><br>ಇನ್ಫೋಸಿಸ್ ಕಂಪನಿಯು ಇನ್ನೂ ನಿರ್ಮಾಣದ ಹಂತದಲ್ಲಿದ್ದು, ಇನ್ನೂ ಪ್ರಾರಂಭವಾಗಿರುವುದಿಲ್ಲ ಆದಕಾರಣ, ಈ ಹಂತದಲ್ಲಿ ಕಂಪನಿಯವರ ವಿರುದ್ಧ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: ಸಿಐ 20 ಐಎಪಿ 2019

(ಕೆ.ಜೆ. ಜಾರ್ಜ್) 11/2/19
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 806
ಸದಸ್ಯರ ಹೆಸರು : ಶ್ರೀ ನಿರಂಜನ್ ಕುಮಾರ್ ಸಿ.ಎಸ್ (ಗುಂಡ್ಲುಪೇಟೆ)
ಉತ್ತರಿಸುವ ಸಚಿವರು : ಮಾನ್ಯ ಸಣ್ಣ ಕೈಗಾರಿಕಾ ಸಚಿವರು.
ಉತ್ತರಿಸುವ ದಿನಾಂಕ : 12-02-2019

| ಕ್ರ ಸಂ | ಪ್ರಶ್ನೆ | ವಿವರ/ಮಾಹಿತಿ |
|---|---|---|
| ಅ) | ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಕಳೆದ 3 ವರ್ಷಗಳಿಂದ ಈವರೆವಿಗೂ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಸರ್ಕಾರ ಉತ್ತೇಜನಕಾರಿಯಾಗಿ ಯಾವ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ; | • ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ವೀರನಪುರ ಗ್ರಾಮದಲ್ಲಿ 10.00 ಎಕರೆ ವಿಸ್ತೀರ್ಣದಲ್ಲಿ ಕೈಗಾರಿಕಾ ವಸಾಹತು ನಿರ್ಮಿಸಿದ್ದು 56 ನಿವೇಶನಗಳನ್ನು ಅಭಿವೃದ್ಧಿಪಡಿಸಲಾಗಿದ್ದು, ಈವರೆಗೆ 45 ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ. ಕಳೆದ ಮೂರು ವರ್ಷಗಳಲ್ಲಿ 03 ನಿವೇಶನಗಳನ್ನು ಹಂಚಿಕೆ ಮಾಡಿ ಯೋಜನೆಗಳಿಗೆ ಅನುಮೋದನೆ ನೀಡಲಾಗಿದೆ.<br>• ಪ್ರಧಾನ ಮಂತ್ರಿಗಳ ಉದ್ಯೋಗ ಸೃಜನಾ ಯೋಜನೆಯನ್ವಯ ಕಳೆದ ಮೂರು ವರ್ಷಗಳಲ್ಲಿ 13 ಪ್ರಸ್ತಾವನೆಗಳಿಗೆ ಸಾಲ ಮಂಜೂರಾಗಿರುತ್ತದೆ. ಸಿಎಂಇಜಿಪಿ ಯೋಜನೆಯಡಿ ಕಳೆದ ಮೂರು ವರ್ಷಗಳಲ್ಲಿ 4 ಪ್ರಸ್ತಾವನೆಗಳಿಗೆ ಸಾಲ ಮಂಜೂರಾಗಿರುತ್ತದೆ.<br><br>ಕಳೆದ ಮೂರು ವರ್ಷಗಳಿಂದ ಸಣ್ಣ ಕೈಗಾರಿಕೆಗಳಿಗೆ ನೀಡಿರುವ ಸಹಾಯಧನ ಮತ್ತು ಪ್ರೋತ್ಸಾಹಗಳು ಕೆಳಗಿನಂತಿವೆ:<br><br>1 ಮುದ್ರಾಂಕ ಶುಲ್ಕ ವಿನಾಯಿತಿ – 11 ಘಟಕಗಳು<br>2 ಬಂಡವಾಳ ಹೂಡಿಕೆ – 05 ಘಟಕಗಳು – ರೂ.93.87 ಲಕ್ಷ<br>3 ಬಡ್ಡಿ ಸಹಾಯಧನ – 01 ಘಟಕ – ರೂ. 0.82 ಲಕ್ಷ<br>4 ಭೂ ಪರಿವರ್ತನಾ ಶುಲ್ಕ ಮರುಪಾವತಿ – 1 ಘಟಕ – ರೂ. 1.91 ಲಕ್ಷ |
| ಆ) | ಇದರಲ್ಲಿ ಅನುಷ್ಠಾನಗೊಂಡ ಹಾಗೂ ಅನುಷ್ಠಾನಗೊಳ್ಳದೇ ಇರುವ ಯೋಜನೆಗಳು ಯಾವುವು (ವಿವರ ನೀಡುವುದು) | ಮೇಲಿನ ಕಂಡಿಕೆ (ಅ)ರಲ್ಲಿ ಅನುಷ್ಠಾನಗೊಂಡ ಕಾರ್ಯಕ್ರಮಗಳ ವಿವರ ನೀಡಲಾಗಿರುತ್ತದೆ.ಇನ್ನುಳಿದಂತೆ ಕೈಗಾರಿಕೆಗಳನ್ನು ಸ್ಥಾಪಿಸಲು ಕೈಗಾರಿಕೋದ್ಯಮಿಗಳಿಂದ ಸ್ವೀಕರಿಸಲಾಗುವ ಪ್ರಸ್ತಾವನೆಗಳ ಬೇಡಿಕೆ ಮತ್ತು ಕೈಗಾರಿಕಾ ನೀತಿ ಅನುಸಾರ ಕ್ರಮ ಕೈಗೊಳ್ಳಲಾಗುತ್ತದೆ. |
| ಇ) | ಪ್ರಸಕ್ತ ಸಾಲಿನಲ್ಲಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಯಾವ ಯಾವ ಕಾರ್ಯಕ್ರಮಗಳನ್ನು ಸರ್ಕಾರ ರೂಪಿಸಿದೆ (ಸಂಪೂರ್ಣ ವಿವರ ನೀಡುವುದು)? | ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.<br><br>1. ಕರ್ನಾಟಕ ಸರ್ಕಾರದ ಮುಖ್ಯಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 10.00 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 25 ರಿಂದ ಶೇ.35 ರವರೆಗೆ ಗರಿಷ್ಠ ರೂ.2.50 ಲಕ್ಷದಿಂದ ರೂ.3.50 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ |

ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.

3. ನಿರುದ್ಯೋಗಿ ಯುವಕ ಯುವತಿಯರಿಗೆ ಉದ್ಯಮಶೀಲರಾಗಲು ಉದ್ದಿಮೆಶೀಲತಾ ಅಭಿವೃದ್ಧಿ ಕಾರ್ಯಕ್ರಮ, ಉದ್ದಿಮೆಶೀಲತಾ ಪ್ರೇರಣಾ ಶಿಬಿರ, ಕೊಳ್ಳುವವರ ಮತ್ತು ಮಾರಾಟಗಾರರ ಸಮಾವೇಶ ಮತ್ತು ಕಲಾವೈಭವ ವಸ್ತು ಪ್ರದರ್ಶನಗಳನ್ನು ನಡೆಸಲಾಗುತ್ತಿದೆ.

4. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.

5. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 10ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.

6. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 50 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಶೇ 90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.

7. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಶೇ 60 ರಷ್ಟು ಸಹಾಯಧನ ನೀಡಲಾಗುತ್ತಿದೆ.

8. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೊದಲನೇ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್ / ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಹೊಸದಾಗಿ ಸ್ಥಾಪಿಸುವ ಘಟಕಗಳಿಗೆ ರೂ. 2.0 ಕೋಟಿ ಯೋಜನಾ ವೆಚ್ಚದ ವರೆಗೆ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್ /ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯವನ್ನು ನೀಡಲಾಗುತ್ತಿದೆ.

9. ದಿನಾಂಕ:01-04-2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳು ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ.

|  |  |  |
|---|---|---|
|  |  | 10. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿನಾಂಕ: 01-04-2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ.<br><br>ರಾಜ್ಯದಲ್ಲಿ ನಿರುದ್ಯೋಗಿಗಳಿಗೆ ಉದ್ಯೋಗ ದೊರಕಿಸಿಕೊಡುವ ನಿಟ್ಟಿನಲ್ಲಿ ಸಣ್ಣ ಕೈಗಾರಿಕೆಗಳನ್ನು ಪ್ರಾರಂಭಿಸಲು ಹಾಗೂ ಅವುಗಳ ಅಭಿವೃದ್ಧಿಗಾಗಿ ಸರ್ಕಾರವು ಕೈಗಾರಿಕಾ ನೀತಿ 2014-19 ಅನ್ನು ಜಾರಿಗೆ ತಂದಿರುತ್ತದೆ. ಕೈಗಾರಿಕೆ ಅಭಿವೃದ್ಧಿಯಲ್ಲಿ ಅತೀ ಹಿಂದುಳಿದ, ಹಿಂದುಳಿದ ಅಭಿವೃದ್ಧಿ ಹೊಂದುತ್ತಿರುವ ಹಾಗೂ ಅಭಿವೃದ್ಧಿ ಹೊಂದಿರುವ ಜಿಲ್ಲೆ/ತಾಲ್ಲೂಕುಗಳನ್ನು ಆಧರಿಸಿ ವಲಯ-1 ರಿಂದ 4 ರವರೆಗೆ ಹೈದ್ರಾಬಾದ-ಕರ್ನಾಟಕ ಹಾಗೂ ಹೈದ್ರಾಬಾದಯೇತರ ಕರ್ನಾಟಕ ವಲಯಗಳೆಂದು ವಿಂಗಡಿಸಿ ಕೆಳಕಂಡ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ನೀಡಲಾಗುತ್ತಿದೆ.<br><br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>2. ಬಂಡವಾಳ ಹೂಡಿಕೆ ಸಹಾಯಧನ<br>3. ಬಡ್ಡಿ ಸಹಾಯಧನ<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>5. ಪ್ರವೇಶ ತೆರಿಗೆ ವಿನಾಯಿತಿ.<br>6 ರಫ್ತು ಆದಾರಿತ ಘಟಕಗಳಿಗೆ ರಿಯಾಯಿತಿ.<br>7. ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯಿತಿ.<br>8. ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ.<br>9. ವಿದ್ಯುತ್ ತೆರಿಗೆ ವಿನಾಯಿತಿ<br>10. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಮತ್ತು ಪೇಟೆಂಟ್ ನೋಂದಣಿ ಸಹಾಯಧನ<br>11. ಮಳೆ ನೀರು ಕೊಯ್ಲು / ಸಂರಕ್ಷಣೆ ಸಹಾಯಧನ<br>12. ಶಕ್ತಿ ಸಂರಕ್ಷಣೆ ಸಹಾಯಧನ<br>13. ಯೋಜನಾ ವರದಿ ತಯಾರಿಕಾ ವೆಚ್ಚ ಮರುಪಾವತಿ<br>14. ಎಸ್‌ಸಿ/ಎಸ್‌ಟಿ ಉದ್ಯಮಶೀಲರಿಗೆ ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನ ಹಂಚಿಕೆ ಮಾಡಲಾಗುವುದು. |

ಶಿಐ 15 ಸಪ್ರಕೈ 2019

(ಎಸ್. ಆರ್. ಶ್ರೀನಿವಾಸ್(ವಾಸು))
ಸಣ್ಣ ಕೈಗಾರಿಕೆ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 158
ಸದಸ್ಯರ ಹೆಸರು : ಶ್ರೀ ಸೋಮಶೇಖರ್ ಎಸ್.ಟಿ. (ಯಶವಂತಪುರ)
ಉತ್ತರಿಸಬೇಕಾದ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರಸ | ಪ್ರಶ್ನೆ | ಉತ್ತರ |
|---|---|---|
| 1 | ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮಿತದಲ್ಲಿ ಉತ್ಪಾದಿಸುತ್ತಿರುವ ಉತ್ಪನ್ನಗಳು ಯಾವುವು? (ವಿವರ ನೀಡುವುದು) | ಕರ್ನಾಟಕ ಸಾಬೂನು ಮತ್ತು ಮಾರ್ಜಕ ನಿಯಮತವು ಉತ್ಪಾದಿಸುತ್ತಿರುವ ಉತ್ಪನ್ನಗಳ ಪಟ್ಟಿಯನ್ನು ಅನುಬಂಧ-'ಎ' ನಲ್ಲಿ ಲಗತ್ತಿಸಲಾಗಿದೆ. |
| 2 | ಈ ಉತ್ಪನ್ನಗಳ ಮಾರುಕಟ್ಟೆಗೆ ಸಂಸ್ಥೆ ಕೈಗೊಳ್ಳುತ್ತಿರುವ ಕ್ರಮಗಳೇನು? | ಸಂಸ್ಥೆಯು ತಯಾರಿಸಿದ ಉತ್ಪನ್ನಗಳನ್ನು ಮಾರಾಟ ಮಾಡಲು ಕಂಪನಿಯು ದೇಶದಾದ್ಯಂತ 21 ಗೋಡನ್ ಗಳನ್ನು ಹೊಂದಿದ್ದು, 1575 ವಿತರಕರು ಇದ್ದು, 3,18,000 ಅಂಗಡಿಗಳಿಗೆ ನೇರವಾಗಿ ಸರಬರಾಜು ಮಾಡಲಾಗುತ್ತಿದೆ. ಈ ಮೂಲಕ ದೇಶದ ಗ್ರಾಹಕರಿಗೆ ಸಂಸ್ಥೆಯ ಉತ್ಪನ್ನಗಳು ತಲುಪಲು ತನ್ನದೇ ಆದ ಮಾರುಕಟ್ಟೆ ಜಾಲವನ್ನು ವಿಸ್ತರಿಸಲಾಗಿದೆ.<br><br>ಪ್ರತಿ ವರ್ಷ ಶೇ. 4% ರಷ್ಟು ಚಿಲ್ಲರೆ ಮಾರಾಟಗಾರರ (ರಿಟೇಲರ್) ಪ್ರಮಾಣವನ್ನು ಹೆಚ್ಚಳಗೊಳಸುತ್ತಿರುವುದರಿಂದ ಸಂಸ್ಥೆ ಉತ್ಪಾದಿಸುವ ಉತ್ಪನ್ನಗಳು ಗ್ರಾಹಕರಿಗೆ ಸುಲಭವಾಗಿ ತಲುಪುವಂತೆ ಕ್ರಮ ಕೈಗೊಳ್ಳಲಾಗಿದೆ. |
| 3 | ಸರ್ಕಾರದ ಅಧೀನದಲ್ಲಿರುವ ಪಡಿತರ ಅಂಗಡಿ, ಕೆಎಂಎಫ್ ಮಳಿಗೆ, ಹಾಪ್‌ಕಾಮ್ಸ್ ಹಾಗೂ ಇತರೆ ಸ್ಥಳಗಳಲ್ಲಿ ಈ ಉತ್ಪನ್ನಗಳ ಮಾರಾಟಕ್ಕೆ ಅವಕಾಶ ನೀಡಲು ಸಾಧ್ಯವಿಲ್ಲವೇ; ಅವಕಾಶ ಕಲ್ಪಿಸಿದ್ದಲ್ಲಿ ಈ ಉತ್ಪನ್ನಗಳ ಮಾರಾಟಕ್ಕೆ ಅನುಕೂಲವಾಗುವುದಿಲ್ಲವೇ ? | ಕೆ.ಎಸ್.ಡಿ.ಎಲ್ ಸಂಸ್ಥೆಯ ಉತ್ಪನ್ನಗಳನ್ನು ಪಡಿತರ ಅಂಗಡಿ, ಕೆಎಂಎಫ್ ಮಳಿಗೆ, ಹಾಪ್‌ಕಾಮ್ಸ್ ಮಳಿಗೆಗಳಲ್ಲಿ ಮಾರಾಟ ಮಾಡಲು ಸಂಬಂಧಪಟ್ಟ ಇಲಾಖೆ/ಸಂಸ್ಥೆಯವರು ಅವಕಾಶ ಕಲ್ಪಿಸಿಕೊಟ್ಟಲ್ಲಿ ಕಂಪನಿಯು ಉತ್ಪನ್ನಗಳನ್ನು ಮಾರಾಟ ಮಾಡಲು ಸಿದ್ಧವಿರುತ್ತದೆ. |

ಸಂಖ್ಯೆ: ಸಿಐ 22 ಸಿಪಿಎಂ 2019

( ಕೆ.ಜೆ.ಜಾರ್ಜ್ )
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 158ಕ್ಕೆ ಅನುಬಂಧ

### ಉತ್ಪನ್ನಗಳ ವಿವರ/ಮಾಹಿತಿ

**ಸಾಬೂನು**

ಮೈಸೂರ್ ಸ್ಯಾಂಡಲ್ ಮಿಲೇನಿಯಂ -150ಗ್ರಾಂ
ಮೈಸೂರ್ ಸ್ಯಾಂಡಲ್ ಸೆಂಟೇನೀಯಲ್ ಸೋಪ್-100ಗ್ರಾಂ
ಮೈಸೂರ್ ಸ್ಯಾಂಡಲ್ ಗೋಲ್ಡ್ ಸೋಪ್-75ಗ್ರಾಂ
ಮೈಸೂರ್ ಸ್ಯಾಂಡಲ್ ಗೋಲ್ಡ್ ಸಿಕ್ಸರ್-750ಗ್ರಾಂ
ಮೈಸೂರ್ ಸ್ಯಾಂಡಲ್ ಸೋಪ್ -75ಗ್ರಾಂ
ಮೈಸೂರ್ ಸ್ಯಾಂಡಲ್ ಸೋಪ್-125ಗ್ರಾಂ
ಮೈಸೂರ್ ಸ್ಯಾಂಡಲ್ ಕ್ಲಾಸಿಕ್ ಸೋಪ್-75ಗ್ರಾಂ
ಮೈಸೂರ್ ಸ್ಯಾಂಡಲ್ ಬಾತ್ ಸೋಪ್-150ಗ್ರಾಂ
ಮೈಸೂರ್ ಸ್ಯಾಂಡಲ್ -150*3=450 ಗ್ರಾಂ
ಮೈಸೂರ್ ರೋಜ್ ಸೋಪ್-150 ಗ್ರಾಂ
ಮೈಸೂರ್ ಸ್ಯಾಂಡಲ್ ಜಾಸ್ಮಿನ್ ರೋಜ್ ಸೋಪ್-450 ಗ್ರಾಂ
ಮೈಸೂರ್ ಸ್ಯಾಂಡಲ್ ಗೆಸ್ಟ ಟ್ಯಾಬಲೆಟ್ -17 ಗ್ರಾಂ
ಮೈಸೂರ್ ಸ್ಯಾಂಡಲ್ ಗಿಫ್ಟ ಪ್ಯಾಕ್ -900 ಗ್ರಾಂ
ಮೈಸೂರ್ ಸ್ಯಾಂಡಲ್ ಬೇಬಿ ಸೋಪ್-75 ಗ್ರಾಂ
ಮೈ ಸೋಪ್ ಫ್ರೂಟಿ ಫ್ಲೋರ (32*5)-500 ಗ್ರಾಂ
ಮೈ ಸೋಪ್ ಓರೇಂಜ್ ಲೀಮ್(32*5)-500 ಗ್ರಾಂ
ಮೈ ಸೋಪ್ ಲ್ಯಾವೆಂಡರ್ (32*5)-500 ಗ್ರಾಂ
ಮೈ ಸೋಪ್ ರೋಜ್ ಮಿಲ್ಕ್ ಕ್ರೀಮ್(32*5)-500 ಗ್ರಾಂ
ಮೈಸೂರ್ ಸ್ಯಾಂಡಲ್ ಹರ್ಬಲ್ ಕೇರ್-100 ಗ್ರಾಂ
ಮೈಸೂರ್ ರೋಜ್ ಸೋಪ್-100 ಗ್ರಾಂ
ಮೈಸೂರ್ ಕಾರ್ಬೋಲಿಕ್ -150 ಗ್ರಾಂ
ಮೈಸೂರ್ ವೇವ್ ಟರ್ಮರಿಕ್-100 ಗ್ರಾಂ
ಮೈಸೂರ್ ರೋಜ್ ಗೆಸ್ಟ ಟ್ಯಾಬಲೆಟ್ -17ಗ್ರಾಂ
ಮೈಸೂರ್ ವೇವ್ ಲೈಮ್ ಗೆಸ್ಟ ಟ್ಯಾಬಲೆಟ್-17ಗ್ರಾಂ,
ಮೈಸೂರ್ ವೇವ್ ಲೈಮ್ ಗೆಸ್ಟ ಟ್ಯಾಬಲೆಟ್-30ಗ್ರಾಂ
ಮೈಸೂರ್ ಬಾರ್ ಸೋಪ್ -250 ಗ್ರಾಂ

**ಮಾರ್ಜಕಗಳು**

ಮೈಸೂರ್‌ಸ್ಯಾಂಡಲ್ ಡಿಟರ್ಜೆಂಟ್ಸ್ ಕೇಕ್ -150 ಗ್ರಾಂ
ಮೈಸೂರ್‌ಸ್ಯಾಂಡಲ್ ಡಿಟರ್ಜೆಂಟ್ಸ್ ಪೌಡರ್-1000 ಗ್ರಾಂ
ಪಾಯಿಂಟ್ ಎಕ್ಸೆಲ್ ಡಿಟರ್ಜೆಂಟ್ಸ್ -1000 ಗ್ರಾಂ
ಪಾಯಿಂಟ್ ಅಡ್ವಾನ್ಸ್ ಲಿಕ್ವಡ್ ಡಿಟರ್ಜೆಂಟ್-500 ಗ್ರಾಂ,
ಪಾಯಿಂಟ್ ಅಡ್ವಾನ್ಸ್ ಲಿಕ್ವಡ್ ಡಿಟರ್ಜೆಂಟ್ 1000 ಗ್ರಾಂ
ಕ್ಲೀನಾಲ್ ಮಲ್ಟಿ ಪರ್ಫಸ್ ಲಿಕ್ವಡ್-250 ಗ್ರಾಂ,
ಕ್ಲೀನಾಲ್ ಮಲ್ಟಿ ಪರ್ಫಸ್ ಲಿಕ್ವಡ್-1000 ಗ್ರಾಂ,
ಕ್ಲೀನಾಲ್ ಮಲ್ಟಿ ಪರ್ಫಸ್ ಲಿಕ್ವಡ್-5000 ಗ್ರಾಂ,
ಕ್ಲೀನಾಲ್ ಮಲ್ಟಿ ಪರ್ಫಸ್ ಲಿಕ್ವಡ್-50000 ಗ್ರಾಂ
ಮೈಸೂರ್ ಸ್ಯಾಂಡಲ್ ಫ್ರೆಷನಾಲ್-1000 ಗ್ರಾಂ

**ಟಾಲ್ಕ್ ಪೌಡರ್**

ಮೈಸೂರ್ ಸ್ಯಾಂಡಲ್ ಟಾಲ್ಕ್ ಪೌಡರ್-20ಗ್ರಾಂ
ಮೈಸೂರ್ ಸ್ಯಾಂಡಲ್ ಟಾಲ್ಕ್ ಪೌಡರ್-50ಗ್ರಾಂ
ಮೈಸೂರ್ ಸ್ಯಾಂಡಲ್ ಟಾಲ್ಕ್ ಪೌಡರ್-100ಗ್ರಾಂ
ಮೈಸೂರ್ ಸ್ಯಾಂಡಲ್ ಟಾಲ್ಕ್ ಪೌಡರ್-300ಗ್ರಾಂ
ಮೈಸೂರ್ ಸ್ಯಾಂಡಲ್ ಬೇಬಿ ಪೌಡರ್-50ಗ್ರಾಂ
ಮೈಸೂರ್ ಸ್ಯಾಂಡಲ್ ಬೇಬಿ ಪೌಡರ್-100 ಗ್ರಾಂ

**ಹಾಂಡ್ ವಾಶ್**

ಮೈಸೂರ್ ಸ್ಯಾಂಡಲ್ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ಸ್ಟ್ರಾಬೆರಿ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ಫೈನಾಫಲ್ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ಹರ್ಬಲ್ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ರೋಜ್ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ಮ್ಯಾಂಗೋ ಹ್ಯಾಂಡ್ ವಾಶ್-250ಗ್ರಾಂ
ಮೈಸೂರ್ ಸ್ಯಾಂಡಲ್ ಬಾಡಿವಾಶ್-200ಗ್ರಾಂ
ಮೈಸೂರ್ ಸ್ಯಾಂಡಲ್ ಫೇಸ್ ಪ್ಯಾಕ್-75 ಗ್ರಾಂ

**(ರೂಮ್ ಫ್ರೆಷನರ್)-ಓ'ಎಸ್**

ಕಾಫಿ ಬ್ಲೋಸಮ್ ರೂಮ್ ಫ್ರೆಷನರ್-300ಗ್ರಾಂ,
ಲಿಲ್ಲಿ ರೂಮ್ ಫ್ರೆಷನರ್-300ಗ್ರಾಂ
ಸ್ಪ್ರಿಂಗ್ ಫ್ಲವರ್ ರೂಮ್ ಫ್ರೆಷನರ್-300ಗ್ರಾಂ
ಮೌಟೇಂನ್ ಮಿಡೋಸ್ ರೂಮ್ ಫ್ರೆಷನರ್-300ಗ್ರಾಂ
ಟೀ-ರೋಜ್, ರೂಮ್ ಫ್ರೆಷನರ್ -300ಗ್ರಾಂ
ಸ್ಯಾಂಡಲೀ ಸೆನ್ಸ್ ರೂಮ್ ಫ್ರೆಷನರ್--300ಗ್ರಾಂ
ಗ್ರೇ ಫ್ರೂಟ್ಸ್ ರೂಮ್ ಫ್ರೆಷನರ್ -300ಗ್ರಾಂ

**ಸ್ಯಾಂಡಲ್ ವುಡ್ ಆಯಿಲ್**

ಸ್ಯಾಂಡಲ್ ವುಡ್ ಆಯಿಲ್-5 ಎಂ ಎಲ್
ಸ್ಯಾಂಡಲ್ ವುಡ್ ಆಯಿಲ್ 10 ಎಂ ಎಲ್

**ಕೊಬ್ಬರಿ ಎಣ್ಣೆ**

ಕೊಬ್ಬರಿ ಎಣ್ಣೆ-50 ಗ್ರಾಂ
ಕೊಬ್ಬರಿ ಎಣ್ಣೆ-100 ಗ್ರಾಂ
ಕೊಬ್ಬರಿ ಎಣ್ಣೆ-150 ಗ್ರಾಂ
ಕೊಬ್ಬರಿ ಎಣ್ಣೆ -200 ಗ್ರಾಂ
ಕೊಬ್ಬರಿ ಎಣ್ಣೆ -500 ಗ್ರಾಂ
ಮೈ. ಸ್ಯಾಂಡಲ್ ಬೇಬಿ ಮಸಾಜ್ ಆಯಿಲ್-100ಎಂಲ್
ಮೈಸೂರ್ ಸ್ಯಾಂಡಲ್ ಸುಕ್ ಮಸಾಜ್ ಆಯಿಲ್-100ಎಂಲ್
ಮೈಸೂರ್ ಸ್ಯಾಂಡಲ್ ಬೇಬಿ ಶಾಂಪೂ -100 ಎಂ ಎಲ್

**ಅಗರಬತ್ತಿ**

ಮೈಸೂರ್ ಸ್ಯಾಂಡಲ್ ಜಾಸ್ಮಿನ್ ಅಗರಬತ್ತಿ
ಮೈಸೂರ್ ಸ್ಯಾಂಡಲ್ ರೋಜ್ ಅಗರಬತ್ತಿ
ಮೈಸೂರ್ ಸ್ಯಾಂಡಲ್ ನಾಗಚಂಪ ಅಗರಬತ್ತಿ
ಮೈಸೂರ್ ಸ್ಯಾಂಡಲ್ ಮಿಸ್ಟೀಕ್ ಅಗರಬತ್ತಿ
ಮೈಸೂರ್ ಸ್ಯಾಂಡಲ್ ಸರ್.ಎಂ.ವಿ.-100 ಅಗರಬತ್ತಿ
ಮೈಸೂರ್ ಸ್ಯಾಂಡಲ್ ಜಾಸ್ಮಿನ್ ಧೂಪ್
ಮೈಸೂರ್ ಸ್ಯಾಂಡಲ್ ಧೂಪ್
ಮೈಸೂರ್ ಸ್ಯಾಂಡಲ್ ದಿವ್ಯ ಕರ್ಪೂರ
ಮೈಸೂರ್ ಸ್ಯಾಂಡಲ್ ದಿವ್ಯ ಪೂಜಾ ಕಿಟ್

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 659
ಸದಸ್ಯರ ಹೆಸರು : ಶ್ರೀ ಶಿವನಗೌಡ ನಾಯಕ್ ಕೆ. (ದೇವದುರ್ಗ)
ಉತ್ತರಿಸುವವರು : ಮಾನ್ಯ ಸಣ್ಣ ಕೈಗಾರಿಕೆ ಸಚಿವರು
ಉತ್ತರಿಸಬೇಕಾದ ದಿನಾಂಕ : 12.02.2019

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ದೇವದುರ್ಗ ತಾಲ್ಲೂಕಿನಲ್ಲಿ ಕೈಗಾರಿಕಾ ವಸಾಹತು ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಪ್ರಸ್ತುತ ಯಾವ ಹಂತದಲ್ಲಿದೆ; ಹೊಸ ಕೈಗಾರಿಕಾ ವಸಾಹತು ಸ್ಥಾಪಿಸಲು ಬೇಕಾಗಿರುವ ಸೌಲಭ್ಯಗಳಾವುವು; | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮದಿಂದ ದೇವದುರ್ಗ ತಾಲ್ಲೂಕಿನಲ್ಲಿ ಸಣ್ಣ ಉದ್ದಿಮದಾರರುಗಳು ತಮ್ಮ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂದೆ ಬಂದಲ್ಲಿ, ಕೈಗಾರಿಕೋದ್ಯಮಿಗಳ ಬೇಡಿಕೆಯನ್ನು ಆಧರಿಸಿ ಹಾಗೂ ನಿಗಮದ ಹಣಕಾಸು ಲಭ್ಯತೆಗೆ ಅನುಗುಣವಾಗಿ ಮತ್ತು ಈ ಬಗ್ಗೆ ವೈಜ್ಞಾನಿಕ ಬೇಡಿಕೆ ಸಮೀಕ್ಷೆ ನಡೆಸಿ, ಕೈಗಾರಿಕಾ ವಸಾಹತು ಸ್ಥಾಪಿಸಲು ಅವಶ್ಯ ಕ್ರಮ ಜರುಗಿಸಲಾಗುವುದು.<br><br>ಸಾರಿಗೆ ಸಂಪರ್ಕ ಹೊಂದಿದ ರಸ್ತೆಗೆ ಹೊಂದಿಕೊಂಡ ಜಾಗ, ಕಚ್ಚಾವಸ್ತು ಲಭ್ಯತೆ, ಮಾನವ ಸಂಪನ್ಮೂಲ ಲಭ್ಯತೆ, ನೀರು ಲಭ್ಯತೆ, ಸಮತಟ್ಟಾದ ಜಾಗ ಹಾಗೂ ವಿದ್ಯುತ್ ಸೌಲಭ್ಯ ಹೊಂದಿರುವ ಜಮೀನು ಹೊಸ ಕೈಗಾರಿಕಾ ವಸಾಹತು ಸ್ಥಾಪನೆಗೆ ಬೇಕಾಗಿರುವ ಸೌಲಭ್ಯವಾಗಿರುತ್ತವೆ. |
| ಆ | ದೇವದುರ್ಗ ತಾಲ್ಲೂಕಿನಲ್ಲಿ ಕೈಗಾರಿಕಾ ವಸಾಹತು ಸ್ಥಾಪಿಸಲು ಭೂಮಿ ಲಭ್ಯವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಎಷ್ಟು ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲು ಸರ್ಕಾರ ಚಿಂತಿಸಿದೆ; | ದೇವದುರ್ಗ ತಾಲ್ಲೂಕಿನ ದೇವದುರ್ಗ ಗ್ರಾಮದ ಹಲವಾರು ಸರ್ವೆ ನಂ.ಗಳಲ್ಲಿನ 29 ಎಕರೆ 31 ಗುಂಟೆ ಪ್ರದೇಶವನ್ನು ವಿಧಿ28(4)ರಡಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಭೂಸ್ವಾಧೀನವಾಗಿದ್ದು, ಕರ್ನಾಟಕ ರಾಜ್ಯ ಪತ್ರದಲ್ಲಿ ದಿನಾಂಕ 12-11-1992 ರಂದು ಪ್ರಕಟವಾಗಿರುತ್ತದೆ. ದಿನಾಂಕ 06-05-2005 ರಂದು ಮಂಡಳಿಯ ಸಭೆಯಲ್ಲಿ ನಕ್ಷೆ ಮತ್ತು ವೆಚ್ಚದ ರಚನೆ ಅನುಮೋದನೆಗೊಂಡಿದ್ದು ಕೈಗಾರಿಕಾ ಬಡಾವಣೆ ನಿರ್ಮಾಣದ ಕಾಮಗಾರಿಗೆ ದಿ:03-06-2006 ರಂದು ಕಾರ್ಯಾದೇಶ ನೀಡಲಾಗಿತ್ತು. ತದನಂತರದಲ್ಲಿ ಕಾಮಗಾರಿಗೆ ನೀಡಿದ ಕಾರ್ಯಾದೇಶವನ್ನು ರದ್ದುಪಡಿಸಲು ತೀರ್ಮಾನಿಸಲಾಗಿರುತ್ತದೆ.<br><br>ಸದರಿ ಕೈಗಾರಿಕಾ ಪ್ರದೇಶದ ಪರಿಷ್ಕೃತ ನಕ್ಷೆ ಮತ್ತು ವೆಚ್ಚದ ರಚನೆಯನ್ನು ದಿನಾಂಕ 21-06-2018 ರಂದು ನಡೆದ ಉಪ ಸಮಿತಿ ಸಭೆಯಲ್ಲಿ ಪ್ರಸ್ತಾಪಿಸಲಾಗಿದ್ದು, ಸದರಿ ಉಪ ಸಮಿತಿ ಸಭೆಯ ಅಭಿಪ್ರಾಯವನ್ನು ಅನುಮೋದನೆಗಾಗಿ ಮಂಡಳಿಯ ಸಭೆಗೆ ಮಂಡಿಸಲಾಗುವುದು. |
| ಇ | ಸದರಿ ಜಾಗದಲ್ಲಿ 200 ಎಕರೆ ಲಭ್ಯವಿದೆಯೆಂದು ಸ್ಥಳೀಯ ಶಾಸಕರು ತಿಳಿಸಿದ್ದರೂ ಸಹ ಅಧಿಕಾರಿಗಳು ಕೇವಲ 20 ಎಕರೆ ಜಮೀನು ಮಾತ್ರ ಭೂಸ್ವಾಧೀನ ಪಡಿಸಿಕೊಳ್ಳಲು ಶಿಫಾರಸ್ಸು ಮಾಡುವುದು ಸರಿಯಾದ ಕ್ರಮವಾಗಿದೆಯೇ; | ಪರಿವೀಕ್ಷಣೆ ಮಾಡಿರುವ ಸದರಿ ಖಾಸಗಿ ಜಮೀನು ದೇವದುರ್ಗ ಪಟ್ಟಣದಿಂದ 6 ಕಿ.ಮೀ ದೂರದಲ್ಲಿದ್ದು, ಸ್ಥಳೀಯರು ತಮ್ಮ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಮುಂದೆ ಬರುವ ಸಂಭವವು ಅತ್ಯಂತ ವಿರಳವಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ಸದರಿ ಭೂಮಿಯಲ್ಲಿ ಕೈಗಾರಿಕಾ ವಸಾಹತು ಸ್ಥಾಪಿಸುವ ನಿಟ್ಟಿನಲ್ಲಿ ಸದರಿ ಜಮೀನಿನ ವೈಜ್ಞಾನಿಕ ಬೇಡಿಕೆ ಸಮೀಕ್ಷೆ ನಡೆಸಿ, ಬೇಡಿಕೆ ಸಮೀಕ್ಷೆಗೆ ಅನುಗುಣವಾಗಿ ಅವಶ್ಯ ಕ್ರಮ ಕೈಗೊಳ್ಳಲಾಗುತ್ತದೆ. |

| | | |
|---|---|---|
| ಈ | ಇದರಿಂದ ಮಹತ್ವಾಕಾಂಕ್ಷೆಯ ಯೋಜನೆಗಳು ನಿರ್ದಿಷ್ಟ ರೂಪದಲ್ಲಿ ಸಾರ್ವಜನಿಕರಿಗೆ ತಲುಪಲು ಸಾಧ್ಯವಿದೆಯೇ; | ಬೇಡಿಕೆ ಸಮೀಕ್ಷೆಗೆ ಅನುಗುಣವಾಗಿ ಕೈಗಾರಿಕಾ ವಸಾಹತುವನ್ನು ಅಭಿವೃದ್ಧಿಪಡಿಸಿದಲ್ಲಿ, ಕೈಗಾರಿಕಾ ಯೋಜನೆಯು ಸಾರ್ವಜನಿಕರಿಗೆ ತಲುಪುತ್ತದೆ. |
| ಉ | ಅಧಿಕಾರಿಗಳು ಈ ರೀತಿ ಮಾಡುವುದು ಶಾಸಕರ ಹಕ್ಕನ್ನು ಮೊಟಕುಗೊಳಿಸಿದಂತಾಗುವುದಲ್ಲವೆ; | ಕೆಎಸ್ಎಸ್ಐಡಿಸಿ ಪ್ರಚಲಿತ ನಿಯಮಾವಳಿಗಳನ್ವಯ ಯಾವುದೇ ಸ್ಥಳದಲ್ಲಿ ಕೈಗಾರಿಕಾ ವಸಾಹತುವನ್ನು ಸ್ಥಾಪಿಸುವ ಮುನ್ನ ವಸಾಹತುವಿನ ಆ ಸ್ಥಳದ ಬೇಡಿಕೆ ಸಮೀಕ್ಷೆ ನಡೆಸುವುದು ಅತ್ಯವಶ್ಯ ಹಾಗೂ ಅನಿವಾರ್ಯವಾಗಿರುತ್ತದೆ. ಬೇಡಿಕೆ ಸಮೀಕ್ಷೆಗೆ ಎದುರಾಗಿ ಸಾರ್ವಜನಿಕರಿಂದ / ಸಣ್ಣ ಉದ್ದಿಮೆದಾರರುಗಳಿಂದ **ನಿರೀಕ್ಷಿತ ಮಟ್ಟದ ಬೇಡಿಕೆಗಳು** ಸ್ವೀಕೃತಗೊಳ್ಳದಿದ್ದಲ್ಲಿ ನಿಗಮದಿಂದ ಅನಾವಶ್ಯಕ ಬಂಡವಾಳ ಹೂಡಿಕೆ ಮಾಡಿದಂತಾಗುತ್ತದೆ ಹಾಗೂ ತೊಡಗಿಸುವ ಹೂಡಿಕೆಯೂ ನಷ್ಟವಾಗಲಿದೆ. |
| ಊ | ಸರ್ಕಾರ 200 ಎಕರೆ ಜಮೀನನ್ನು ಭೂ ಸ್ವಾಧೀನಪಡಿಸಿಕೊಂಡು ದೇವದುರ್ಗದಲ್ಲಿ ಕೈಗಾರಿಕಾ ವಸಾಹತು ಸ್ಥಾಪಿಸಲು ಬದ್ಧವಿದೆಯೇ; ಹಾಗಿದ್ದಲ್ಲಿ, ಯಾವಾಗ ಸ್ಥಾಪಿಸಲಾಗುವುದು; | ಬೇಡಿಕೆ ಸಮೀಕ್ಷೆಗೆ ಅನುಗುಣವಾಗಿ ಮತ್ತು ನಿಗಮದ ಹಣಕಾಸಿನ ಲಭ್ಯತೆಗೆ ಅನುಗುಣವಾಗಿ ಸದರಿ ಸ್ಥಳದಲ್ಲಿ ಕೈಗಾರಿಕಾ ವಸಾಹತುವನ್ನು ಸ್ಥಾಪಿಸಲು ಕ್ರಮ ಜರುಗಿಸಲಾಗುವುದು. |
| ಋ | ಸಣ್ಣ ಕೈಗಾರಿಕಾ ವಸಾಹತು ಸ್ಥಾಪಿಸಲು ಕೇವಲ 20 ಎಕರೆ ಭೂಮಿಯಲ್ಲಿ ಸಾಧ್ಯವಾಗುವುದೇ; ಯೋಜನೆಯಿಂದ ಸಾರ್ವಜನಿಕರಿಗೆ ಅನುಕೂಲವಾಗುವುದೇ? | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕಾ ಅಭಿವೃದ್ಧಿ ನಿಗಮದಿಂದ ಕೈಗಾರಿಕಾ ವಸಾಹತು ಸ್ಥಾಪನೆಗೆ ಬೇಡಿಕೆ ಸಮೀಕ್ಷೆ ಆಧರಿಸಿ ಕೈಗಾರಿಕಾ ವಸಾಹತು ಸ್ಥಾಪಿಸಲು ಕ್ರಮವಹಿಸಲಾಗುವುದು. |

**ಸಿಐ 18 ಸಿಎಸ್‌ಸಿ 2019**

[ಎಸ್.ಆರ್. ಶ್ರೀನಿವಾಸ್ (ವಾಸು)]
**ಸಣ್ಣ ಕೈಗಾರಿಕೆ ಸಚಿವರು**

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಸದಸ್ಯರ ಹೆಸರು | : | ಶ್ರೀ.ಮಸಾಲ ಜಯರಾಮ್ (ತುರುವೇಕೆರೆ) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 829 |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಯವರು |
| ಉತ್ತರಿಸಬೇಕಾದ ದಿನಾಂಕ | : | 12.02.2019 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ತುರುವೇಕೆರೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕಲ್ಲೂರು ಮತ್ತು ಮುನಿಯೂರು ಗ್ರಾಮದಲ್ಲಿ ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು 1975ರಲ್ಲಿ ಕಛೇರಿ ಸ್ಥಾಪಿಸಿದ್ದು, ಆ ಸಮಯದಲ್ಲಿ ಒಟ್ಟು 1 ಸಾವಿರ ಕೈಮಗ್ಗಗಳನ್ನು ನೇಕಾರರು ನೊಂದಾಯಿಸಿದ್ದು, ಈ ಕೈಮಗ್ಗಗಳಿಗೆ ಸರಿಯಾದ ರೇಷ್ಮೆ ಪೂರೈಕೆಯಾಗದ ಕಾರಣ ಪ್ರಸ್ತುತ ಹಾಲಿ 65 ರಿಂದ 70 ಜನ ಮಾತ್ರ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿದ್ದು ಉಳಿದ ನೇಕಾರರು ಅತಂತ್ರ ಸ್ಥಿತಿಯಲ್ಲಿ ಜೀವನ ಸಾಗಿಸುತ್ತಿರುವುದು ಹಾಗೂ ಗುಳೆ ಹೋಗುವಂತಹ ಪರಿಸ್ಥಿತಿ ಬಂದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ | ಹಾಗಿದ್ದಲ್ಲಿ, ಕೈಮಗ್ಗ ನೇಯ್ಗೆಯನ್ನೆ ಜೀವನೋಪಾಯಕ್ಕಾಗಿ ನಂಬಿರುವ ನೇಕಾರರಿಗೆ ನಿರಂತರವಾಗಿ ರೇಷ್ಮೆ ಪೂರೈಕೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು; ಈ ಬಗ್ಗೆ ಅಸ್ತಿತ್ವದಲ್ಲಿರುವ ಮಾನದಂಡಗಳೇನು; | ನಿಗಮದ ವ್ಯಾಪ್ತಿಯಲ್ಲಿರುವ ನೋಂದಾಯಿತ ನೇಕಾರರುಗಳಿಂದ ತಯಾರಾಗುತ್ತಿರುವ ಸಾಂಪ್ರದಾಯಿಕ ರೇಷ್ಮೆ ಸೀರೆಗಳಿಗೆ ಕಾಲಕ್ರಮೇಣ ಬೇಡಿಕೆ ಕಡಿಮೆಯಾಗುತ್ತಿದೆ. ಇದಕ್ಕೆ ಪ್ರಮುಖ ಕಾರಣ, ವಿದ್ಯುತ್ ಮಗ್ಗ ಮತ್ತು ಮಿಲ್‌ಗಳಲ್ಲಿ ಸೀರೆಗಳ ಉತ್ಪಾದನಾ ವೆಚ್ಚಗಳು ಕಡಿಮೆ ಇರುವುದರಿಂದ ವಿವಿಧ ವರ್ಣ ವಿನ್ಯಾಸಗಳುಳ್ಳ ಸೀರೆಗಳನ್ನು ತಯಾರು ಮಾಡಲು ಹೆಚ್ಚುವರಿ ವೆಚ್ಚ ತಗಲುವುದಿಲ್ಲ. ಇದರಿಂದಾಗಿ, ವಿದ್ಯುತ್ ಮಗ್ಗಗಳು ಮತ್ತು ಮಿಲ್‌ಗಳಲ್ಲಿ ತಯಾರಾಗುವ ಸೀರೆಗಳು ಕೈಮಗ್ಗ ಸೀರೆಗಳಿಗಿಂತ ಕಡಿಮೆ ದರದಲ್ಲಿ ಲಭ್ಯವಾಗುವುದಲ್ಲದೆ, ಆಕರ್ಷಕ ವಿನ್ಯಾಸಗಳಲ್ಲಿ ದೊರಯುವುದರಿಂದ, ಕೈಮಗ್ಗ ಸೀರೆಗಳಿಗೆ ಬೇಡಿಕೆ ಕಡಿಮೆಯಾಗುತ್ತಿದೆ.<br><br>ಈ ಕಾರಣಗಳಿಂದಾಗಿ ಅನೇಕ ಕೈಮಗ್ಗ ನೇಕಾರರುಗಳು ಹೆಚ್ಚಿನ ಉತ್ಪಾದನೆ ಮತ್ತು ಉತ್ತಮ ಆದಾಯ ಗಳಿಸುವ ನಿಟ್ಟಿನಲ್ಲಿ ಕೈಮಗ್ಗಗಳನ್ನು ತೊರೆದು ವಿದ್ಯುತ್ ಮಗ್ಗಗಳನ್ನು ಅಳವಡಿಸಿಕೊಂಡಿರುವುದರಿಂದ, ಕೈಮಗ್ಗ ನೇಕಾರರುಗಳ ಸಂಖ್ಯೆ ಕಾಲಕ್ರಮೇಣ ಕಡಿಮೆಯಾಗುತ್ತಿದೆ. |

| | | |
|---|---|---|
| | | ಕೈಮಗ್ಗ ನೇಕಾರರುಗಳಿಗೆ ನಿರಂತರ ರೇಷ್ಮೆ ನೂಲು ಸರಬರಾಜು ಮಾಡುವ ನಿಟ್ಟಿನಲ್ಲಿ ನಿಗಮವು ಅಗತ್ಯ ಪ್ರಮಾಣದ ರೇಷ್ಮೆ ನೂಲು ಖರೀದಿಸುವ ನಿಟ್ಟಿನಲ್ಲಿ ಟೆಂಡರ್ ಕರೆದಿದ್ದು, ಪ್ರಸ್ತುತ ಟೆಂಡರ್ ಪ್ರಕ್ರಿಯೆಯು ಮುಗಿದಿರುತ್ತದೆ. ಇದರಿಂದ ತ್ವರಿತವಾಗಿ ನೂಲು ಖರೀದಿಸಿ, ನೇಕಾರರಿಗೆ ರೇಷ್ಮೆ ನೂಲು ಪೂರೈಸಲು ಕ್ರಮ ಕೈಗೊಳ್ಳಲಾಗಿದೆ.<br><br>ನೇಕಾರರಿಂದ ಮಾರುಕಟ್ಟೆ ಬೇಡಿಕೆಗನುಗುಣವಾಗಿ ಉತ್ಪಾದಿಸಬಹುದಾದ ಸೀರೆ / ಬಟ್ಟೆಗಳಿಗೆ ರೇಷ್ಮೆ ನೂಲು ವಿತರಿಸಿ, ನೇಕಾರರಿಗೆ ನಿರಂತರ ಉದ್ಯೋಗ ಕಲ್ಪಿಸಲಾಗುತ್ತಿದೆ. |
| ಇ | ಈ ಹಿಂದೆ ಇದ್ದ ಕೈಮಗ್ಗ ನೇಕಾರರನ್ನು ಪ್ರೋತ್ಸಾಹಿಸಲು ನೇಯ್ಗೆ ಬಟ್ಟೆಯ ಮಜೂರಿಯಲ್ಲಿ ಶೇಕಡಾ 30 ಪ್ರೋತ್ಸಾಹಧನ ಪಾವತಿ /ಆರೋಗ್ಯ ವಿಮೆ/ ಜೀವ ವಿಮೆ ಯೋಜನೆಗಳನ್ನು ಮುಂದುವರಿಸುವ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ಕರ್ನಾಟಕ ಕೈಮಗ್ಗ ಅಭಿವೃದ್ಧಿ ನಿಗಮವು 2013 ರಿಂದ ಕೈಮಗ್ಗ ನೇಕಾರರನ್ನು ಪ್ರೋತ್ಸಾಹಿಸಲು ನೇಕಾರರ ವಿಶೇಷ ಪ್ಯಾಕೇಜ್ ಯೋಜನೆಯಡಿ ಉತ್ಪಾದನಾ ಪ್ರೋತ್ಸಾಹಧನವನ್ನು ನೀಡುತ್ತಾ ಬಂದಿರುತ್ತದೆ.<br><br>2018-19 ನೇ ಸಾಲಿನಲ್ಲಿ ಮಾತ್ರ, ಸರ್ಕಾರದಿಂದ ಕಡಿಮೆ ಅನುದಾನ ಬಿಡುಗಡೆಯಾದ ಕಾರಣ ನೇಕಾರರಿಗೆ ಪ್ರೋತಾಹಧನ ನೀಡಲಾಗಿರುವುದಿಲ್ಲ.<br><br>2018-19ನೇ ಸಾಲಿನಿಂದ ಜೀವ ವಿಮೆ ಸೌಲಭ್ಯವನ್ನು ಒದಗಿಸಿದ್ದು, 18 ರಿಂದ 50 ವರ್ಷದ ಒಳಗಿನ ಕೈಮಗ್ಗ ನೇಕಾರರನ್ನು ಪಿ.ಎಮ್.ಜೆ.ಬಿ.ವೈ. ಮತ್ತು ಪಿ.ಎಮ್.ಎಸ್.ಬಿ.ವೈ. ಯೋಜನೆಯಡಿ ಹಾಗೂ 51 ರಿಂದ 59 ವರ್ಷ ವಯಸ್ಸಿನೊಳಗಿನ ಕೈಮಗ್ಗ ನೇಕಾರರನ್ನು ಎಮ್.ಜಿ.ಬಿ.ಬಿ.ವೈ. ಯೋಜನೆಗಳಡಿಯಲ್ಲಿ ದಿನಾಂಕ: 31.5.2018ರಿಂದ ಅನ್ವಯವಾಗುವಂತೆ ಜೀವ ವಿಮೆ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. |

ವಾಕ್ಯ 12 ಜುಲೈ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 849
ಸದಸ್ಯರ ಹೆಸರು : ಶ್ರೀ ಆಚಾರ್ ಹಾಲಪ್ಪ ಬಸಪ್ಪ (ಯಲಬುರ್ಗಾ).
ಉತ್ತರಿಸುವ ದಿನಾಂಕ : 12.02.2019.
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಯಲಬುರ್ಗಾ ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪ್ರೌಢ ಶಾಲೆಗಳಲ್ಲಿ ಇಂಗ್ಲೀಷ್ ಶಿಕ್ಷಕರ ಹುದ್ದೆಗಳು ಖಾಲಿ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಇಂಗ್ಲೀಷ್ ಭಾಷಾ ಶಿಕ್ಷಕರ ಕೊರತೆಯಿಂದ ಶೈಕ್ಷಣಿಕ ಬೆಳವಣಿಗೆ ಕುಂಠಿತಗೊಂಡಿರುವ ಬಗ್ಗೆ ಸರ್ಕಾರ ಕೈಗೊಂಡ ಪರ್ಯಾಯ ವ್ಯವಸ್ಥೆಗಳೇನು; | ಅತಿಥಿ ಶಿಕ್ಷಕರನ್ನು ನೇಮಕ ಮಾಡುವ ಮೂಲಕ ಶೈಕ್ಷಣಿಕ ಬೆಳವಣಿಗೆ ಕುಂಠಿತಗೊಳ್ಳದಂತೆ ಪರ್ಯಾಯ ವ್ಯವಸ್ಥೆ ಮಾಡಲಾಗಿದೆ. |
| ಇ) | ಈ ಹುದ್ದೆಗಳನ್ನು ಯಾವಾಗ ಭರ್ತಿ ಮಾಡಲಾಗುವುದು? | ಈಗಾಗಲೇ ಸದರಿ ಶಾಲೆಗಳಿಗೆ ಅಗತ್ಯ ಶಿಕ್ಷಕರುಗಳನ್ನು ನಿಯೋಜಿಸಲಾಗಿದೆ. |

ಸಂಖ್ಯೆ: ಇಡಿ 84 ಎಸ್‌ಇಎಸ್ 2019)

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 574

ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್ ಹೆಬ್ಬಾಳ್ಕರ್ (ಬೆಳಗಾಂ ಗ್ರಾಮಾಂತರ )

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆಗಳಿಂದ ಕಡಿಮೆ ದರದಲ್ಲಿ ವಿದ್ಯುತ್ ಪಡೆಯುತ್ತಿರುವುದರಿಂದ ಈ ಕಾರ್ಖಾನೆಗಳಿಗೆ ಉಂಟಾಗಿರುವ ತೊಂದರೆಗಳ ಬಗ್ಗೆ ಸರ್ಕಾರಕ್ಕೆ ಮಾಹಿತಿ ಇದೆಯೇ; ಇದ್ದರೆ ಕೈಗೊಂಡ ಕ್ರಮಗಳೇನು; | ರಾಜ್ಯ ಸರ್ಕಾರವು ದಿನಾಂಕ 11-11-2016 ರ ಆದೇಶದಲ್ಲಿ ಬಗಾಸ್ ಆಧಾರಿತ 28 ಸಕ್ಕರೆ ಕಾರ್ಖಾನೆಗಳಿಂದ 501 ಮೆ.ವ್ಯಾ ವಿದ್ಯುತ್‌ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ನಿಗದಿ ಪಡಿಸುವ ದರಗಳ ಅನುಗುಣವಾಗಿ ವಿದ್ಯುತ್ ಖರೀದಿಸುವಂತೆ ವಿತರಣ ಕಂಪನಿಗಳಿಗೆ ಆದೇಶ ನೀಡಿತ್ತು.<br>ವಿತರಣ ಕಂಪನಿಗಳು ಮತ್ತು ಸಹ ವಿದ್ಯುತ್ ಉತ್ಪಾದಕರು ದರ ನಿಗದಿಪಡಿಸುವಂತೆ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಮುಂದೆ ಅಹವಾಲು ಸಲ್ಲಿಸಿದ್ದು, ಆಯೋಗವು ದಿನಾಂಕ: 05-12-2016 ರಂದು ಮಧ್ಯಂತರ ದರವಾಗಿ ರೂ. 3.47 ನ್ನು ಪ್ರತಿ ಯೂನಿಟ್‌ಗೆ ನೀಡುವಂತೆ ಆದೇಶಿಸಿತು.<br>ಈ ದರವನ್ನು ಅಳವಡಿಸಿಕೊಂಡು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ನಿಗದಿಪಡಿಸುವ ಅಂತಿಮ ದರವನ್ನು ಅಳವಡಿಸಿಕೊಳ್ಳುವ ಷರತ್ತಿಗೊಳಪಟ್ಟು ದಿನಾಂಕ: 02-01-2017 ಮತ್ತು ಮುಂದಿನ ದಿನಗಳಲ್ಲಿ ವಿದ್ಯುತ್ ಖರೀದಿ ಒಪ್ಪಂದಗಳನ್ನು ಸಹ ಉತ್ಪಾದಕರು ಮತ್ತು ವಿತರಣ ಕಂಪನಿಗಳು ಮಾಡಿಕೊಂಡವು.<br>ಆಯೋಗವು ದಿನಾಂಕ: 11-04-2017 ರಂದು, ಈ ಹಿಂದೆ ಆಯೋಗವು ವಿವಿಧ ಕಂಟ್ರೋಲ್ ಅವಧಿಗೆ ನಿಗದಿಪಡಿಸಿದ್ದ ನಿಗದಿತ ಶುಲ್ಕ ಮತ್ತು ಎನರ್ಜಿ ಶುಲ್ಕಗಳನ್ನು ಪರಿಗಣನೆಗೆ ತೆಗೆದುಕೊಂಡು, ಸಹ ವಿದ್ಯುತ್ ಉತ್ಪಾದನಾ ಘಟಕವು ವಾಣಿಜ್ಯವಾಗಿ ಚಾಲನೆಗೊಂಡ ವರ್ಷದಿಂದ ಅನ್ವಯವಾಗುವಂತೆ ದರಗಳನ್ನು ನಿಗದಿಪಡಿಸಿತು. ಈ ದರಗಳನ್ನು ಅನ್ವಯಿಸಿ ಪಾವತಿ ಮಾಡುವ ಸಮಯದಲ್ಲಿ, ಕೆಲವು ವಿದ್ಯುತ್ ಉತ್ಪಾದಕರ ಘಟಕಗಳು ವಿವಿಧ ವರ್ಷಗಳಲ್ಲಿ ವಾಣಿಜ್ಯವಾಗಿ ಕಾರ್ಯಾಚರಣೆಗೊಂಡಿದ್ದು, ಯಾವ ದರವನ್ನು ನೀಡಬೇಕೆಂಬುದರ ಬಗ್ಗೆ ಗೊಂದಲವುಂಟಾಗಿ, ಆಯೋಗಕ್ಕೆ ಸ್ಪಷ್ಟನೆ ನೀಡುವಂತೆ ಕೋರಿದಾಗ, ಆಯೋಗವು 12-02-2018ರ ಪತ್ರದಲ್ಲಿ ಮೊದಲ ಘಟಕವು ಕಾರ್ಯಾರಂಭಗೊಂಡ ವರ್ಷದಲ್ಲಿ ಆ ಘಟಕದ ನಿವ್ವಳ ರಫ್ತು ಸಾಮರ್ಥ್ಯದ ವಿದ್ಯುತ್ ಪ್ರಮಾಣವನ್ನು ಪರಿಗಣಿಸಿ, ಉಳಿದ ವಿದ್ಯುತ್ ಪ್ರಮಾಣವನ್ನು ನಂತರದ ವಿದ್ಯುತ್ ಘಟಕ ಕಾರ್ಯಾಚರಣೆಗೊಂಡ ವರ್ಷದಲ್ಲಿ ಅನ್ವಯಿಸುವ ದರವನ್ನು ಪರಿಗಣಿಸಿ ಪಾವತಿಸುವಂತೆ ಆದೇಶಿಸಿತು.<br>ಆಯೋಗದ ದಿನಾಂಕ: 11-04-2017ರ ಆದೇಶ ಮತ್ತು 12-2-2018ರ ಸ್ಪಷ್ಟೀಕರಣದ ಪತ್ರದಂತೆ ಬೆಂಗಳೂರು, ಚಾಮುಂಡೇಶ್ವರಿ ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗಳು ಸಕ್ಕರೆ ಕಾರ್ಖಾನೆಗಳಿಗೆ ವಿದ್ಯುತ್ ಖರೀದಿಗೆ ಸಂಬಂಧಿಸಿದ ಹಣವನ್ನು ಪಾವತಿಸುತ್ತಿದೆ.<br>ಹುಬ್ಬಳ್ಳಿ ಹಾಗೂ ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗಳು ಆಯೋಗದ ಮಧ್ಯಂತರ ಆದೇಶದ ದರ ರೂ. 3.47 ರಂತೆ ಪ್ರತಿ ಯೂನಿಟ್‌ಗೆ ವಿದ್ಯುತ್ ಖರೀದಿಗೆ ಸಂಬಂಧಿಸಿದ ಹಣವನ್ನು ಪಾವತಿಸುತ್ತಿವೆ. |

| | | |
|---|---|---|
| ಆ) | ರಾಜ್ಯದ ವಿದ್ಯುತ್ ಉತ್ಪಾದನೆಯಲ್ಲಿ ಸಕ್ಕರೆ ಕಾರ್ಖಾನೆಗಳ ಪಾಲು ಎಷ್ಟು; (ಮಾಹಿತಿ ಒದಗಿಸುವುದು). | ಪ್ರಸಕ್ತ ಸಾಲಿನ ಡಿಸೆಂಬರ್ ಅಂತ್ಯದವರೆಗೆ ರಾಜ್ಯದ ವಿದ್ಯುತ್ ಜಾಲಕ್ಕೆ ವಿವಿಧ ಮೂಲಗಳಿಂದ 56233 ದಶಲಕ್ಷ ಯೂನಿಟ್‌ಗಳಷ್ಟು ವಿದ್ಯುತ್ ಲಭ್ಯವಾಗಿದ್ದು, ಈ ಪೈಕಿ ಸಕ್ಕರೆ ಕಾರ್ಖಾನೆಗಳಿಂದ 1170.187 ದಶಲಕ್ಷ ಯೂನಿಟ್‌ಗಳಷ್ಟು ವಿದ್ಯುತ್ ಲಭ್ಯವಾಗಿರುತ್ತದೆ. |
| ಇ) | ಸಕ್ಕರೆ ಕಾರ್ಖಾನೆಗಳ ವಿದ್ಯುತ್ ಖರೀದಿಗೆ ಪ್ರಸ್ತುತ ನೀಡುತ್ತಿರುವ ದರವನ್ನು ಪರಿಷ್ಕರಿಸುವ ವಿಚಾರ ಸರ್ಕಾರಕ್ಕಿದೆಯೇ? | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ದಿನಾಂಕ:11-04-2017ರ ಆದೇಶ ಮತ್ತು ದಿನಾಂಕ: 12-2-2018ರ ಪತ್ರದ ಸ್ಪಷ್ಟನೆಯನ್ನು ಅಂಗೀಕರಿಸದ ಕೆಲ ಸಹ ವಿದ್ಯುತ್ ಉತ್ಪಾದಕರು ಆಯೋಗದ ಮುಂದೆ ಮತ್ತು ಮಾನ್ಯ ಉಚ್ಛ ನ್ಯಾಯಾಲಯದ ಮುಂದೆ ದಾವೆ ಹೂಡಿರುತ್ತಾರೆ ಹಾಗೂ ದಿನಾಂಕ: 11-04-2017 ರ ಆಯೋಗದ ಆದೇಶದಲ್ಲಿ ಕೆಲವು ಅಂಶಗಳಲ್ಲಿ ಅಧಿಕ ದರ ನಿಗದಿಯಾಗಿದ್ದು ಈ ಅಂಶಗಳನ್ನು ಪುನರ್ ಪರಿಶೀಲಿಸುವಂತೆ ವಿತರಣ ಕಂಪನಿಗಳು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಮುಂದೆ ಮರು ಪರಿಶೀಲನಾ ಅರ್ಜಿಯನ್ನು ಸಲ್ಲಿಸಿದ್ದು, ಇದು ಇತ್ಯರ್ಥವಾಗಿರುವುದಿಲ್ಲ. |

ಸಂಖ್ಯೆ: ಇಎನ್ 22 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 655

ಸದಸ್ಯರ ಹೆಸರು : ಶ್ರೀ ಶಿವನಗೌಡ ನಾಯಕ್.ಕೆ (ದೇವದುರ್ಗ)

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ ಮೂರು ವರ್ಷಗಳಲ್ಲಿ ರಾಯಚೂರು ಜಿಲ್ಲೆಯಲ್ಲಿ ಎಲ್ಲೆಲ್ಲಿ ವಿದ್ಯುತ್ ಉಪಕೇಂದ್ರಗಳನ್ನು ಮಂಜೂರು ಮಾಡಲಾಗಿದೆ; ಇದಕ್ಕಾಗಿ ವಿನಿಯೋಗಿಸಿರುವ ಅನುದಾನವೆಷ್ಟು; ಸದರಿ ವಿದ್ಯುತ್ ಉಪ ಕೇಂದ್ರಗಳು ಕಾರ್ಯಾರಂಭ ಮಾಡಿವೆಯೇ; ಇಲ್ಲದಿದ್ದಲ್ಲಿ, ಕಾರಣಗಳೇನು; (ತಾಲ್ಲೂಕುವಾರು ಮತ್ತು ವರ್ಷವಾರು ಮಾಹಿತಿ ನೀಡುವುದು) | ಕಳೆದ 3 ವರ್ಷಗಳಲ್ಲಿ ರಾಯಚೂರು ಜಿಲ್ಲೆಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ವತಿಯಿಂದ ಮಂಜೂರಾಗಿ ವಿವಿಧ ಹಂತದಲ್ಲಿರುವ ವಿದ್ಯುತ್ ಉಪಕೇಂದ್ರಗಳ ವಿವರಗಳನ್ನು **ಅನುಬಂಧದಲ್ಲಿ ನೀಡಿದೆ.** |
| ಆ) | ದೇವದುರ್ಗ ವ್ಯಾಪ್ತಿಯ ವಿವಿಧ ಗ್ರಾಮ ಗಳಲ್ಲಿರುವ ವಿದ್ಯುತ್ ಉಪಕೇಂದ್ರಗಳ ಮೂಲಕ ಮಾಡಲಾಗುತ್ತಿರುವ ವಿದ್ಯುತ್ ಸರಬರಾಜು ವ್ಯವಸ್ಥೆಯಿಂದ ರೈತರಿಗೆ ಮತ್ತು ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರವ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಕೈಗೊಂಡಿರುವ ಕ್ರಮಗಳೇನು; | ದೇವದುರ್ಗ ನಗರ ವ್ಯಾಪ್ತಿಯಲ್ಲಿ ದಿನವಹಿ 24 ಘಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ನಿರಂತರ ಜ್ಯೋತಿ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದ್ದು, ಕೃಷಿಯೇತರ ಬಳಕೆಗೆ 22 ರಿಂದ 24 ಘಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ನೀರಾವರಿ ಪಂಪ್‌ಸೆಟ್‌ಗಳಿಗೆ ದಿನವಹಿ 7 ಘಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಇ) | ಈ ಭಾಗದ ರೈತರಿಗೆ ಮತ್ತು ಸಾರ್ವಜನಿಕರಿಗೆ ವಿದ್ಯುತ್ ಅಭಾವವನ್ನು ನೀಗಿಸಲು ದೇವದುರ್ಗ ತಾಲ್ಲೂಕಿಗೆ ಹೊಸ ವಿದ್ಯುತ್ ಉಪ ಕೇಂದ್ರಗಳನ್ನು ಮಂಜೂರು ಮಾಡುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಅದು ಪ್ರಸ್ತುತ ಯಾವ ಹಂತದಲ್ಲಿದೆ; | ಪ್ರಸ್ತುತ ದೇವದುರ್ಗ ಮತ್ತು ಸುತ್ತಮುತ್ತಲಿನ ಪ್ರದೇಶಗಳಿಗೆ ದೇವದುರ್ಗದಿಂದ ಸುಮಾರು 10 ಕಿ.ಮೀ. ದೂರದಲ್ಲಿರುವ 110 ಕೆ.ವಿ. ದೇವದುರ್ಗ ವಿದ್ಯುತ್ ಉಪಕೇಂದ್ರದಿಂದ ಸಮರ್ಪಕವಾಗಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದ್ದು, ಪ್ರಸ್ತುತ ಹೊಸದಾಗಿ ವಿದ್ಯುತ್ ಉಪಕೇಂದ್ರ ಸ್ಥಾಪಿಸುವ ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |
| ಈ) | 2019-20ನೇ ಸಾಲಿಗೆ ದೇವದುರ್ಗಕ್ಕೆ ಹೊಸ ವಿದ್ಯುತ್ ಉಪಕೇಂದ್ರಗಳನ್ನು ಮಂಜೂರು ಮಾಡಲಾಗುವುದೇ? | |

ಸಂಖ್ಯೆ: ಇಎನ್ 36 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

ಮಾನ್ಯ ವಿಧಾನಸಭೆ ಸದಸ್ಯರಾದ ಶ್ರೀ. ಶಿವನಗೌಡ ನಾಯಕ್ ಕೆ. (ದೇವದುರ್ಗ) ಇವರ ಪ್ರಶ್ನೆ ಸಂಖ್ಯೆ: 655 ಕ್ಕೆ

ಅನುಬಂಧ:

ರಾಯಚೂರು ಜಿಲ್ಲೆಗೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ವತಿಯಿಂದಕಳೆದ ಮೂರು ವರ್ಷಗಳಲ್ಲಿ ಮಂಜೂರಾಗಿ, ವಿವಿಧ ಹಂತದಲ್ಲಿರುವ ವಿದ್ಯುತ್ ಉಪಕೇಂದ್ರಗಳ ವಿವರಗಳು:

ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ:

| ಕ್ರ.ಸಂ. | ತಾಲ್ಲೂಕು | ವಿದ್ಯುತ್ಉಪಕೇಂದ್ರದ ಹೆಸರು | ವೋಲ್ಟೇಜ್ ಪ್ರವರ್ಗ | ಎಲ್.ಓ.ಐ ನೀಡಿದ ದಿನಾಂಕ | ಪ್ರಸ್ತಾವನೆಯ ಹಂತ | ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|---|---|---|---|
| 2015-16 | | | | | | |
| 1 | ರಾಯಚೂರು | ಇಡಪ್ನೂರ್. | 33/11kV (2x5MVA) | 12-08-2015. | ಪೂರ್ಣಗೊಂಡಿದೆ (ದಿ:29-11-2016). | 7.05 |
| 2 | ಮಾನ್ವಿ | ರಾಜಲ್‌ಬಂಡಾ | 33/11kV (2x5MVA) | 18-01-2016. | ಪೂರ್ಣಗೊಂಡಿದೆ (ದಿ:11-05-2017). | 6.35 |
| 3 | ಲಿಂಗಸೂಗುರು | ಮೆಡಿಕ್‌ನಾಳ | 33/11kV (2x5MVA) | 18-01-2016. | ಪೂರ್ಣಗೊಂಡಿದೆ (ದಿ:04-07-2017). | 6.63 |
| 2016-17 –ಯಾವುದೂಇರುವುದಿಲ್ಲ | | | | | | |
| 2017-18 | | | | | | |
| 4 | ಸಿಂಧನೂರು | ಗುಂಡಾ | 33/11kV (2x5MVA) | 20-09-2017. | ಪ್ರಗತಿಯಲ್ಲಿದೆ | 6.97 |
| 5 | ರಾಯಚೂರು | ಮಾಮದದೊಡ್ಡಿ | 33/11kV (2x5MVA) | 14-03-2018. | ಪ್ರಗತಿಯಲ್ಲಿದೆ | 2.56 |
| 2018-19 –ಯಾವುದೂಇರುವುದಿಲ್ಲ | | | | | | |

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ:

| ಕ.ಸಂ | ತಾಲ್ಲೂಕು | ವಿದ್ಯುತ್ಉಪಕೇಂದ್ರದ ಹೆಸರು | ಡಿ.ಪಿ.ಆರ್ ಮಂಜೂರಾತಿ ದಿನಾಂಕ | ವೋಲ್ಟೇಜ್ ಪ್ರವರ್ಗ | ಪ್ರಸ್ತಾವನೆಯ ಹಂತ | ವೆಚ್ಚ (ರೂ. ಕೋಟಿಗಳಲ್ಲಿ) |
|---|---|---|---|---|---|---|
| 2015-16 | | | | | | |
| 1 | ರಾಯಚೂರು | ಯಾಪಲ್‌ದಿನ್ನಿ | 05.05.2015 | 110/11 ಕೆ.ವಿ. | ದಿನಾಂಕ:31.03.2018ರಲ್ಲಿಕಾಮಗಾರಿಯು ಪೂರ್ಣಗೊಂಡಿರುತ್ತದೆ | 11.39 |
| 2016-17 | | | | | | |
| ಯಾವುದೂಇರುವುದಿಲ್ಲ | | | | | | |
| 2017-18 | | | | | | |
| ಯಾವುದೂಇರುವುದಿಲ್ಲ | | | | | | |
| 2018-19 (ಡಿಸೆಂಬರ್‌ಅಂತ್ಯದವರೆಗೆ) | | | | | | |
| 2 | ಲಿಂಗಸೂರು | ಬೈಯ್ಯಾಪುರ | 17.12.2018 | 110/11 ಕೆ.ವಿ. | ಟೆಂಡರ್‌ಕರೆಯುವ ಹಂತದಲ್ಲಿದೆ. | 12.87 |
| 3 | ಸಿಂಧನೂರು | ಗಾಂಧೀನಗರ | 14.01.2019 | 110/11 ಕೆ.ವಿ. | ಟೆಂಡರ್‌ಕರೆಯುವ ಹಂತದಲ್ಲಿದೆ. | 8.71 |

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 539 |
| ಸದಸ್ಯರ ಹೆಸರು | : | ಶ್ರೀ ಅಖಂಡ ಶ್ರೀನಿವಾಸಮೂರ್ತಿ ಆರ್. (ಪುಲಿಕೇಶಿ ನಗರ) |
| ಉತ್ತರಿಸಬೇಕಾದ ದಿನಾಂಕ | : | 12-02-2019 |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿಗಳು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಪುಲಿಕೇಶಿನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಹೆಣ್ಣೂರು ಮುಖ್ಯರಸ್ತೆಯಲ್ಲಿರುವ ಚಾರ್ಲ್ಸ್ ಶಾಲೆ ಹಾಗೂ ಶ್ರೀ ಈಶ್ವರ ದೇವಸ್ಥಾನದ ಮುಂದೆ ಇರುವ ಹೈ-ಟೆನ್ಷನ್ ವಿದ್ಯುತ್ ಕಂಬಗಳು, ಟ್ರಾನ್ಸ್‌ಫಾರ್ಮರ್ ಮತ್ತು ಸಿಂಗಲ್ ಕಂಬಗಳು ರಸ್ತೆ ಮಧ್ಯ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪುಲಕೇಶಿನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಹೆಣ್ಣೂರು ಮುಖ್ಯರಸ್ತೆಯಲ್ಲಿರುವ ಚಾರ್ಲ್ಸ್ ಶಾಲೆ ಹಾಗೂ ಶ್ರೀ ಈಶ್ವರ ದೇವಸ್ಥಾನದ ಮುಂದೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಸೇರಿದ 66 ಕೆ.ವಿ. ಹೆಬ್ಬಾಳ್-ಹೆಚ್.ಬಿ.ಆರ್-1 (ಬಾಣಸವಾಡಿ-ಪ್ಯಾಟರಿ ರಸ್ತೆ) ಮೇಲು ಮಾರ್ಗವು ಹಾದು ಹೋಗಿದ್ದು, ಸದರಿ ಮಾರ್ಗವನ್ನು 1999ರಲ್ಲಿ ನಿರ್ಮಿಸಲಾಗಿರುತ್ತದೆ. ಹಾಲಿ ಇರುವ 4 ಪೋಲ್ ಸ್ಟ್ರಕ್ಚರ್ ರಸ್ತೆಯ ಅಗಲೀಕರಣಕ್ಕೂ ಮುಂಚಿತವಾಗಿ ರಸ್ತೆಯ ಅಂಚಿನಲ್ಲಿ ವಿದ್ಯುತ್‌ಚ್ಛಕ್ತಿ ಕಾಯ್ದೆ 1956 ರ ನಿಯಮಾವಳಿ 80 ರ ಪ್ರಕಾರ ಸ್ಥಾಪಿಸಲಾಗಿರುತ್ತದೆ. ಸದರಿ ಸ್ಟ್ರಕ್ಚರ್ ಸ್ಥಳಾಂತರಿಸದೆ ರಸ್ತೆ ಅಗಲೀಕರಣ ಮಾಡಿರುವುದರಿಂದ 4 ಪೋಲ್ ಸ್ಟ್ರಕ್ಚರ್ ರಸ್ತೆಯ ಮಧ್ಯ ಭಾಗದಲ್ಲಿರುತ್ತದೆ. |
| ಆ) | ಬಂದಿದ್ದಲ್ಲಿ, ಇವುಗಳನ್ನು ಸ್ಥಳಾಂತರಿಸುವ ಬಗ್ಗೆ ಸರ್ಕಾರವು ಯಾವ ಕ್ರಮ ಕೈಗೊಂಡಿದೆ; | |
| ಇ) | ಸದರಿ ರಸ್ತೆಯ ಮಧ್ಯದಲ್ಲಿರುವ ಈ ಕಂಬಗಳನ್ನು ಸ್ಥಳಾಂತರಿಸದಿರಲು ಕಾರಣವೇನು; | ಸದರಿ ಸ್ಟ್ರಕ್ಚರ್ ರಸ್ತೆಯ ಅಂಚಿಗೆ ಸ್ಥಳಾಂತರಿಸಲು ಅವಶ್ಯವಿರುವ ಜಾಗದ ಕೊರತೆಯಿಂದಾಗಿ ಸ್ಥಳಾಂತರಿಸಲು ಈವರೆವಿಗೂ ಸಾಧ್ಯವಾಗಿರುವುದಿಲ್ಲ ಮತ್ತು ಬೆಂಗಳೂರು ಮಹಾನಗರ ಪಾಲಿಕೆ ವತಿಯಿಂದ ಯಾವುದೇ ಪ್ರಸ್ತಾವನೆ ಬಂದಿರುವುದಿಲ್ಲ. |
| ಈ) | ಸದರಿ ಕಂಬಗಳು ರಸ್ತೆ ಮಧ್ಯವಿರುವುದರಿಂದ ವಾಹನ ಅಪಘಾತಗಳು ಉಂಟಾಗುತ್ತಿರುವುದು ಹಾಗೂ ಸಾರ್ವಜನಿಕರಿಗೆ ದಿನನಿತ್ಯ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸದರಿ ಕಂಬಗಳನ್ನು ರಸ್ತೆ ಮಧ್ಯದಿಂದ ಸ್ಥಳಾಂತರಿಸಲು ತುರ್ತಾಗಿ ಕ್ರಮ ಕೈಗೊಳ್ಳಲಾಗುವುದೇ (ವಿವರ ನೀಡುವುದು)? | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಪುಲಕೇಶಿನಗರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯ ಹೆಣ್ಣೂರು ಮುಖ್ಯರಸ್ತೆಯಲ್ಲಿರುವ ಚಾರ್ಲ್ಸ್ ಶಾಲೆ ಹಾಗೂ ಶ್ರೀ ಈಶ್ವರ ದೇವಸ್ಥಾನದ ಮುಂದೆ ಒಂದು ವಿದ್ಯುತ್ ಕಂಬ ಮತ್ತು ಒಂದು ಟಿ.ಸಿ ಸ್ಟ್ರಕ್ಚರ್ ಇರುವುದು ಸ್ಥಳ ಪರಿಶೀಲನೆ ಮಾಡಿದಾಗ ಕಂಡುಬಂದಿರುತ್ತದೆ. ಇವುಗಳು ರಸ್ತೆ ಅಗಲೀಕರಣಕ್ಕೂ ಮೊದಲು ರಸ್ತೆಯ ಅಂಚಿನಲ್ಲಿದ್ದು, ತದನಂತರ ವಿದ್ಯುತ್ ಕಂಬ ಮತ್ತು ಟಿ.ಸಿ. ಸ್ಟ್ರಕ್ಚರ್‌ಗಳು ರಸ್ತೆಯ ಮಧ್ಯ (MEDIAN) ಭಾಗದಲ್ಲಿ ಉಳಿದುಕೊಂಡಿರುತ್ತವೆ. ಇವುಗಳನ್ನು ಸೂಕ್ತ ಸ್ಥಳಕ್ಕೆ ಸ್ಥಳಾಂತರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಸಂಖ್ಯೆ: ಇಎನ್ 19 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

**ಕರ್ನಾಟಕ ವಿಧಾನ ಸಭೆ**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 845 |
| ಸದಸ್ಯರ ಹೆಸರು | : ಶ್ರೀ ಬಸವರಾಜ ಬಿ. ಮತ್ತಿಮುಡ (ಗುಲ್ಬರ್ಗಾ ಗ್ರಾಮಾಂತರ) |
| ಉತ್ತರಿಸುವ ದಿನಾಂಕ | : 12.02.2019 |
| ಉತ್ತರಿಸುವ ಸಚಿವರು | : ಮಾನ್ಯ ಮುಖ್ಯ ಮಂತ್ರಿಗಳು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಲಬುರಗಿ ಗ್ರಾಮೀಣ ಮತಕ್ಷೇತ್ರಕ್ಕೆ ಕಳೆದ ಮೂರು ವರ್ಷಗಳಲ್ಲಿ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖಾ ವತಿಯಿಂದ ಎಷ್ಟು ಅನುದಾನ ನಿಗದಿಪಡಿಸಲಾಗಿತ್ತು: ನಿಗದಿಪಡಿಸಿದ ಅನುದಾನದಲ್ಲಿ ಇಲ್ಲಿಯವರೆಗೂ ಬಿಡುಗಡೆ ಮಾಡಿದ ಅನುದಾನವೆಷ್ಟು (ವರ್ಷವಾರು ಮಾಹಿತಿ ಒದಗಿಸುವುದು): | ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ವತಿಯಿಂದ ಯಾವುದೇ ಯೋಜನೆಯನ್ನು ಗ್ರಾಮೀಣವಾರು ವಿಂಗಡಿಸದೇ ಈ ಕೆಳಕಂಡ ಯೋಜನೆಗಳನ್ನು ಕೇಂದ್ರ ಸರ್ಕಾರದೊಂದಿಗೆ ವೆಚ್ಚ ಹಂಚಿಕೆ ಆಧಾರದ ಮೇಲೆ ರೈಲು ಮಾರ್ಗ/ರಸ್ತೆ ಮೇಲು/ಕೆಳ ಸೇತುವೆ ಯೋಜನೆ ಹಾಗೂ ಕಲಬುರಗಿ ವಿಮಾನ ನಿಲ್ದಾಣದ ಯೋಜನೆಯನ್ನು ಕೈಗೆತ್ತಿಕೊಂಡು ಅನುದಾವನ್ನು ಬಿಡುಗಡೆಗೊಳಸಲಾಗಿದೆ. |
| ಆ | ಬಿಡುಗಡೆಯಾದ ಅನುದಾನದಲ್ಲಿ ಕೈಗೊಂಡ ಕಾಮಗಾರಿಗಳು ಯಾವುವು: | |
| ಇ | ಈ ಪೈಕಿ ಎಷ್ಟು ಯೋಜನೆಗಳು ಪೂರ್ಣಗೊಂಡಿರುತ್ತದೆ. | |
| ಈ | ಪ್ರಗತಿಯಲ್ಲಿರುವ ಯೋಜನೆಗಳಾವುವು: ಪೂರ್ಣಗೊಳಸಲು ಇನ್ನೂ ಎಷ್ಟು ಕಾಲಾವಕಾಶ ಬೇಕಾಗಿರುತ್ತದೆ? | |

| ಯೋಜನೆ | ಮಂಜೂರಾದ ಅನುದಾನ (ಕೋಟಿಗಳಲ್ಲಿ) | ಬಿಡುಗಡೆಗೊಳಸಲಾದ ಅನುದಾನ (ಕೋಟಿಗಳಲ್ಲಿ) | ಯೋಜನೆಯ ಹಂತ |
|---|---|---|---|
| ಕಲಬುರಗಿ – ಬೀದರ್ ರೈಲು ಮಾರ್ಗ | 771.25 | 771.25 | ಪೂರ್ಣಗೊಂಡಿದೆ |
| ಚಿತ್ತಾಪೂರದಲ್ಲಿ ಬರುವ ಎಲ್.ಸಿ ಸಂಖ್ಯೆ:3 ಎ ರಸ್ತೆ ಮೇಲು ಸೇತುವೆ ಹಾಗೂ ಕೂಡು ರಸ್ತೆ ನಿರ್ಮಾಣ | 12.2 | 12.00 | ಪ್ರಗತಿಯಲ್ಲಿದೆ. |
| ಅಫ್ಜಲ್‌ಪುರ್ ರಲ್ಲಿ ಬರುವ ಎಲ್.ಸಿ ಸಂಖ್ಯೆ:83 ಬಿ ರಲ್ಲಿ ರಸ್ತೆ ಮೇಲು ಸೇತುವೆ ಹಾಗೂ ಕೂಡು ರಸ್ತೆ ನಿರ್ಮಾಣ | 8.05 | 8.00 | ಪ್ರಗತಿಯಲ್ಲಿದೆ. |
| ಕಲಬುರಗಿ ವಿಮಾನ ನಿಲ್ದಾಣ | 175.57 | 100.49 | ಕಾಮಗಾರಿ ಪೂರ್ಣಗೊಳ್ಳುವ ಹಂತದಲ್ಲಿದೆ. |

ಸಂಖ್ಯೆ: ಮೂಅಇ 7 ನಮೂಯೋ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 833
ಸದಸ್ಯರ ಹೆಸರು : ಶ್ರೀ ಲಾಲಾಜಿ ಆರ್.ಮೆಂಡನ್(ಕಾಪು)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ಉಡುಪಿ ಜಿಲ್ಲೆಯ ಕಾಪು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಹಿರಿಯಡ್ಕ ಮತ್ತು ಪಡುಬಿದ್ರಿ ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ನಿರ್ಮಾಣಕ್ಕೆ ಮಂಜೂರಾಗಿರುವ ಅನುದಾನವನ್ನು ಯಾವ ಕಾರಣದಿಂದ ತಡೆಹಿಡಿಯಲಾಗಿದೆ?<br><br>(ಸಂಪೂರ್ಣ ವಿವರ ನೀಡುವುದು) | ಸರ್ಕಾರಿ ಪದವಿ ಪೂರ್ವ ಕಾಲೇಜು, ಹಿರಿಯಡ್ಕ, ಉಡುಪಿ ಜಿಲ್ಲೆ ಈ ಕಾಲೇಜಿಗೆ ಆರ್ಐಡಿಎಫ್-19 ರ ಯೋಜನೆಯಡಿ ಅನುಮೋದನೆಯಾಗಿರುವ 04 ತರಗತಿ ಕೊಠಡಿ 08 ಶೌಚಾಲಯ ನಿರ್ಮಾಣ ಕಾಮಗಾರಿಗೆ ರೂ.83.20 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದ್ದು, ಕಾಮಗಾರಿ ಮುಕ್ತಾಯಗೊಂಡಿದೆ.<br><br>2017-18 ನೇ ಸಾಲಿನಲ್ಲಿ ಸದರಿ ಕಾಲೇಜಿಗೆ ದುರಸ್ಥಿ/ಕಟ್ಟಡ ನವೀಕರಣ/ಅಭಿವೃದ್ದಿಗಾಗಿ ರೂ.5.00 ಲಕ್ಷಗಳ ಅನುದಾನ ಮಂಜೂರಾಗಿದ್ದು, ಸದರಿ ಅನುದಾನವನ್ನು ಅನುಷ್ಠಾನ ಸಂಸ್ಥೆಯಾದ ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆಯ ಕಾರ್ಯಪಾಲಕ ಅಭಿಯಂತರರಿಗೆ ಬಿಡುಗಡೆ ಮಾಡಲಾಗಿದೆ.<br><br>2018-19ನೇ ಸಾಲಿನಲ್ಲಿ ಈ ಕಾಲೇಜುಗಳಿಗೆ ಇಲಾಖಾವತಿಯಿಂದ ಯಾವುದೇ ಕಾಮಗಾರಿ ಮಂಜೂರಾಗಿರುವುದಿಲ್ಲ ಹಾಗೂ ಮಂಜೂರಾದ ಕಾಮಗಾರಿಗಳಿಗೆ ಅನುದಾನವನ್ನು ತಡೆಹಿಡಿದಿರುವುದಿಲ್ಲ. |

ಇಡಿ 52 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ : 590
ಸದಸ್ಯರ ಹೆಸರು : ಶ್ರೀ ನಿಸರ್ಗ ನಾರಾಯಣ ಸ್ವಾಮಿ ಎಲ್.ಎನ್ (ದೇವನಹಳ್ಳಿ)
ಉತ್ತರಿಸಬೇಕಾದ ದಿನಾಂಕ : 12/02/2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕಛೇರಿಗಳು ನೂತನ ಜಿಲ್ಲಾ ಕೇಂದ್ರಕ್ಕೆ ಸ್ಥಳಾಂತರವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು |
| ಆ) | ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು ಆಡಳಿತ ಮತ್ತು ಅಭಿವೃದ್ಧಿ ಎರಡು ಕಛೇರಿಗಳು ಇನ್ನೂ ಬೆಂಗಳೂರಿನಲ್ಲಿಯೇ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಕಛೇರಿಗಳನ್ನು ಜಿಲ್ಲಾ ಕೇಂದ್ರಕ್ಕೆ ಸ್ಥಳಾಂತರ ಮಾಡಲು ಯಾವ ಕ್ರಮಕೈಗೊಂಡಿದೆ; | ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರು(ಆಡಳಿತ) ಇವರಿಗೆ ಜಿಲ್ಲಾಡಳಿತ ಭವನ, ಬೀರಸಂದ್ರ ಗ್ರಾಮ, ದೇವನಹಳ್ಳಿ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿ ಕೊಠಡಿ ಹಂಚಿಕೆ ಮಾಡದೇ ಇರುವ ಕಾರಣ ಸರ್ಕಾರಿ ಪದವಿ ಪೂರ್ವ ಕಾಲೇಜು, ವಿಶ್ವನಾಥಪುರ, ದೇವನಹಳ್ಳಿ ತಾಲ್ಲೂಕು ಇಲ್ಲಿ ಖಾಲಿ ಇರುವ ಶಾಲಾ ಕೊಠಡಿಗಳಿಗೆ ಶೀಘ್ರವಾಗಿ ಸ್ಥಳಾಂತರ ಮಾಡಲು ಕ್ರಮವಹಿಸಲಾಗುವುದು. |
| ಇ) | ಯಾವ ಕಾಲಮಿತಿಯಲ್ಲಿ ಈ ಕಛೇರಿಗಳನ್ನು ಸ್ಥಳಾಂತರ ಮಾಡಲು ಕ್ರಮ ಕೈಗೊಳ್ಳಲಾಗುವುದು(ವಿವರ ನೀಡುವುದು)? | ಹಾಗೆಯೇ, ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ (ಡಯಟ್), ಬೆಂಗಳೂರು ಗ್ರಾಮಾಂತರ ಜಿಲ್ಲೆ ಇವರಿಗೆ ಜಿಲ್ಲಾ ಕೇಂದ್ರ ಸ್ಥಳದಲ್ಲಿ ಅಗತ್ಯ ಸ್ಥಳಾವಕಾಶ ಹಾಗೂ ಮೂಲಭೂತ ಸೌಲಭ್ಯ ದೊರೆತ ನಂತರ ಸ್ಥಳಾಂತರಿಸಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ಇಡಿ 22 ಡಿಎಚ್‌ಆರ್ 2019.

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | | |
|---|---|---|---|
| 1) | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 542 |
| 2) | ಸದಸ್ಯರ ಹೆಸರು | : | ಶ್ರೀ ದೇವಾನಂದ್ ಫುಲಸಿಂಗ್ ಚವಾಣ್ |
| 3) | ಉತ್ತರಿಸಬೇಕಾದ ದಿನಾಂಕ | : | 12.02.2019 |
| 4) | ಉತ್ತರಿಸುವವರು | : | ಮಾನ್ಯ ಮುಖ್ಯಮಂತ್ರಿಗಳು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ವಿಜಯಪುರ ಜಿಲ್ಲೆಯ ನಾಗಠಾಣ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ವಿಮಾನ ನಿಲ್ದಾಣ ಕಾಮಗಾರಿ ಪ್ರಾರಂಭಿಸುವ ಪ್ರಸ್ತಾವನೆಯು ವಿಳಂಬವಾಗುತ್ತಿರುವುದಕ್ಕೆ ಕಾರಣವೇನು: | ವಿಜಯಪುರ ವಿಮಾನ ನಿಲ್ದಾಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿ ಪಡಿಸಲು ತೀರ್ಮಾನಿಸಿ ಯಶಸ್ವಿ ಬಿಡ್ಡುದಾರರಾದ ಮೆ॥ಮಾರ್ಗ್‌ರವರನ್ನು ಅಭಿವೃದ್ಧಿದಾರರನ್ನಾಗಿ ಆಯ್ಕೆ ಮಾಡಲಾಗಿತ್ತು. ಆದರೆ ಅಭಿವೃದ್ಧಿದಾರರು ವಿಮಾನ ನಿಲ್ದಾಣಕ್ಕಾಗಿ ಗುರುತಿಸಿರುವ ಜಮೀನುಗಳು ಸಮತಟ್ಟಾಗಿಲ್ಲದಿರುವುದರಿಂದ ಹಾಗೂ ಬಂಡೆಗಳು ಇರುವುದರಿಂದ ವಿಜಯಪುರ ವಿಮಾನ ನಿಲ್ದಾಣ ಯೋಜನೆಯು ಆರ್ಥಿಕವಾಗಿ ಮತ್ತು ತಾಂತ್ರಿಕವಾಗಿ ಕಾರ್ಯಸಾಧ್ಯವಲ್ಲವೆಂದು ತಿಳಿಸಿ ಯೋಜನೆಯಿಂದ ಹಿಂದೆ ಸರಿಯಲು ಇಚ್ಛಿಸಿದ್ದರಿಂದ ಅಬಿವೃದ್ಧಿದಾರರೊಂದಿಗೆ ಮಾಡಿಕೊಂಡಿದ್ದ ಯೋಜನಾ ಅಭಿವೃದ್ಧಿ ಒಪ್ಪಂದವನ್ನು ದಿನಾಂಕ:10.01.2014ರಂದು ರದ್ದುಗೊಳಿಸಲಾಗಿರುತ್ತದೆ.<br><br>ಪ್ರಸ್ತುತ ರಾಜ್ಯದ ಇತರ ಜಿಲ್ಲೆಗಳ ಮಾದರಿಯಲ್ಲಿ ವಿಜಯಪುರದಲ್ಲಿಯೂ ಸಹ ಹೆಲಿಪ್ಯಾಡ್ ಮತ್ತು ಹೆಲಿಸರ್ವಿಸಸ್ ಅನ್ನು ನಿರ್ಮಿಸಿ ಸಂಪರ್ಕ ಕಲ್ಪಿಸುವುದಕ್ಕೆ ಉದ್ದೇಶಿಸಲಾಗಿದೆ. |
| ಆ) | ವಿಮಾನ ನಿಲ್ದಾಣ ಕಾಮಗಾರಿಯು ಎಷ್ಟು ದಿನಗಳಲ್ಲಿ ಪ್ರಾರಂಭವಾಗುವುದು: | |
| ಇ) | ವಿಮಾನ ನಿಲ್ದಾಣ ಕಾಮಗಾರಿಯನ್ನು ಅನುಷ್ಠಾನಗೊಳಿಸಲು ಯಾವ ಕಂಪನಿಗೆ ವಹಿಸಲಾಗಿದೆ ಹಾಗೂ ಇದಕ್ಕೆ ತಗಲುವ ವೆಚ್ಚವೆಷ್ಟು: | |
| ಈ) | ವಿಮಾನ ನಿಲ್ದಾಣ ಕಾಮಗಾರಿಯನ್ನು ಯಾವಾಗ ಮುಕ್ತಾಯಗೊಳಿಸಲಾಗುವುದು? | |

ಸಂಖ್ಯೆ: ಮೂಅಇ 17 ರಾಅವಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 812
2) ಸದಸ್ಯರ ಹೆಸರು : ಶ್ರೀಮತಿ ಲಕ್ಷ್ಮೀ ಆರ್.ಹೆಬ್ಬಾಳ್ಕರ್
3) ಉತ್ತರಿಸಬೇಕಾದ ದಿನಾಂಕ : 12.02.2019.
4) ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಉತ್ತರ ಕರ್ನಾಟಕ ಭಾಗದ ಬೆಳಗಾವಿ ಮತ್ತು ಹುಬ್ಬಳ್ಳಿ ವಿಮಾನ ನಿಲ್ದಾಣಗಳನ್ನು ಮೇಲ್ದರ್ಜೆಗೇರಿಸಿ ಅಭಿವೃದ್ಧಿಪಡಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಈ ಬಗ್ಗೆ ಕೈಗೊಂಡ ಕ್ರಮಗಳಾವುವು; | ಬೆಳಗಾವಿ ಮತ್ತು ಹುಬ್ಬಳ್ಳಿ ವಿಮಾನ ನಿಲ್ದಾಣಗಳು ಕೇಂದ್ರ ಸರ್ಕಾರದ ಒಡೆತನದಲ್ಲಿದ್ದು, ವಿಮಾನ ನಿಲ್ದಾಣಗಳ ಕಾರ್ಯಾಚರಣೆ ಮತ್ತು ನಿರ್ವಹಣೆಯನ್ನು ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರವು ನಿರ್ವಹಿಸುತ್ತಿದೆ. ಪ್ರಸ್ತುತ ವಿಮಾನ ನಿಲ್ದಾಣಗಳನ್ನು ಮೇಲ್ದರ್ಜೆಗೇರಿಸಿ ಅಭಿವೃದ್ಧಿಪಡಿಸುವ ಪ್ರಸ್ತಾವನೆಯು ಕೇಂದ್ರ ಸರ್ಕಾರದ ವ್ಯಾಪ್ತಿಗೆ ಒಳಪಟ್ಟಿರುತ್ತದೆ. ಆದುದರಿಂದ ಈ ಸಂಭಂದ ಯಾವುದೇ ಪ್ರಸ್ತಾವನೆ ರಾಜ್ಯ ಸರ್ಕಾರದ ಮುಂದಿಲ್ಲ. |
| ಆ) | ಬೆಳಗಾವಿಯಿಂದ ಇನ್ನಷ್ಟು ವಿಮಾನಗಳನ್ನು ಪ್ರತಿನಿತ್ಯ ಬೆಂಗಳೂರಿಗೆ ಹಾಗೂ ದೇಶದ ಇತರೆ ನಗರಗಳಿಗೆ ಸಂಚರಿಸಲು ವ್ಯವಸ್ಥೆ ಮಾಡಲಾಗುವುದೇ? | ಬೆಳಗಾವಿ ವಿಮಾನ ನಿಲ್ದಾಣವು ಪ್ರಾದೇಶಿಕ ಸಂಪರ್ಕ ಯೋಜನೆ-3(ಉಡಾನ್-3)ರಲ್ಲಿ ಆಯ್ಕೆಯಾಗಿರುತ್ತದೆ. ಸದರಿ ಯೋಜನೆಯಡಿಯಲ್ಲಿ ವಿಮಾನ ನಿರ್ವಾಹಕರುಗಳು ಬೆಂಗಳೂರು ಸೇರಿದಂತೆ ಇತರೆ ನಗರಗಳಿಗೆ ವಿಮಾನ ಸಂಚಾರಕ್ಕಾಗಿ ಬಿಡ್‌ಗಳನ್ನು ಸಲ್ಲಿಸಿದ್ದು, ಕೇಂದ್ರ ಸರ್ಕಾರದಿಂದ ಈ ಬಗ್ಗೆ ಮುಂದಿನ ಬೆಳವಣಿಗೆ ನಿರೀಕ್ಷಿಸಲಾಗಿದೆ. |

ಸಂಖ್ಯೆ: ಮೂಅಇ 16 ರಾಅವಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 960 |
| ಸದಸ್ಯರ ಹೆಸರು : | ಶ್ರೀ ಎಂ.ಪಿ. ರೇಣುಕಾಚಾರ್ಯರವರು (ಹೊನ್ನಾಳಿಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ: | 12.02.2019. |
| ಉತ್ತರಿಸುವ ಸಚಿವರು : | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಮರಳು ಗಣಿಗಾರಿಕೆಯ ಟೆಂಡರ್ ಷರತ್ತುಗಳೇನು; ಟೆಂಡರ್ ಷರತ್ತಿನಲ್ಲಿ ಜೆ.ಸಿ.ಬಿ. ಯಂತ್ರವನ್ನು ಬಳಸಲು ಅವಕಾಶ ನೀಡಲಾಗಿದೆಯೇ; ಯಾವ ಯಾವ ಜಿಲ್ಲೆಗಳಲ್ಲಿ ಜೆ.ಸಿ.ಬಿ. ಯಂತ್ರವನ್ನು ಬಳಸಲಾಗುತ್ತಿದೆ; (ವಿವರ ನೀಡುವುದು) | ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ 1994ರ ತಿದ್ದುಪಡಿ ನಿಯಮ 2016ರ ನಿಯಮ 31-Tರ ಷರತ್ತುಗಳಂತೆ ಮತ್ತು ರಾಜ್ಯ ಸರ್ಕಾರವು ದಿನಾಂಕ:18.11.2016ರಂದು ಹೊರಡಿಸಿರುವ ಮಾರ್ಗಸೂಚಿಯಂತೆ ನದಿ ಪಾತ್ರಗಳಲ್ಲಿ ಗುರುತಿಸಿರುವ ಮರಳು ಬ್ಲಾಕ್‌ಗಳನ್ನು ಟೆಂಡರ್-ಕಂ-ಇ-ಹರಾಜು ಮಾಡಲಾಗಿರುತ್ತದೆ.<br><br>ಸದರಿ ಮಾರ್ಗಸೂಚಿಯಂತೆ ನದಿ ಪಾತ್ರದಲ್ಲಿ ಮರಳು ಗಣಿಗಾರಿಕೆಯಲ್ಲಿ Mechanized Boats and Dredgerಗಳನ್ನು ಬಳಸುವುದು ನಿಷೇದಿಸಿದೆ ಮತ್ತು ಭಾರತ ಸರ್ಕಾರದ ಪರಿಸರ ಮಂತ್ರಾಲಯದಿಂದ ಕಾಲಕಾಲಕ್ಕೆ ಹೊರಡಿಸಲಾಗುವ ಮಾರ್ಗಸೂಚಿಗಳು ಮತ್ತು ಅಧಿಸೂಚನೆಗಳಿಗೆ ಒಳಪಟ್ಟು ನದಿ ಪಾತ್ರದ ಮರಳು ಗಣಿಗಾರಿಕೆಗೆ JCB & Screeningನ್ನು ಬಳಸಲು ಅವಕಾಶ ಕಲ್ಪಿಸಿದೆ. ಆದರೆ River Bankಗೆ ಯಾವುದೇ ರೀತಿಯ ತೊಂದರೆಯಾಗದಂತೆ ಮರಳು ತುಂಬಲು ಜಂಬರ್ಸ್, ಟ್ರಾಕ್ಟರ್ ಮೌಂಟೆಡ್ ಲೋಡರ್ಸ್ ಬಳಸಲು ಅವಕಾಶ ಕಲ್ಪಿಸಿದೆ.<br><br>ಅದರಂತೆ, ಚಿತ್ರದುರ್ಗ, ಶಿವಮೊಗ್ಗ, ಕಲಬುರಗಿ, ಹೊಸಪೇಟೆ, ಯಾದಗಿರಿ, ಬೆಳಗಾವಿ, ಗದಗ, ಹಾವೇರಿ ಮತ್ತು ಬಾಗಲಕೋಟೆ ಜಿಲ್ಲೆಗಳಲ್ಲಿ ರಾಜ್ಯ/ಜಿಲ್ಲಾ ಪರಿಸರ ಪ್ರಭಾವ ಅಂದಾಜೀಕರಣ ಪ್ರಾಧಿಕಾರದಿಂದ ಮರಳು ಗಣಿಗಾರಿಕೆಗೆ JCB & Screeningನ್ನು ಬಳಸಲು ಅನುಮತಿ ಪಡೆದ ಮರಳು ಬ್ಲಾಕ್ ಗಳಲ್ಲಿ ಮಾತ್ರ ಸದರಿ ಯಂತ್ರೋಪಕರಣ ಬಳಸಲಾಗುತ್ತಿದೆ. |
| ಆ) | ಎತ್ತಿನ ಗಾಡಿಯಲ್ಲಿ ಮರಳು ಸಾಗಿಸಲು ಅವಕಾಶ ಇದೆಯೇ; | ದಾವಣಗೆರೆ ಜಿಲ್ಲಾ ವ್ಯಾಪ್ತಿಯಲ್ಲಿ ಪ್ರಾದೇಶಿಕ ಸಾರಿಗೆ ಇಲಾಖೆಯಲ್ಲಿ ನೋಂದಾಯಿತ ಮತ್ತು ಜಿ.ಪಿ.ಎಸ್ ಅಳವಡಿಸಿದ ವಾಹನಗಳಲ್ಲಿ ಮಾತ್ರ ಮರಳು ಸಾಗಾಣಿಕೆ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ. |

| | | |
|---|---|---|
| ಇ) | ಹೊನ್ನಾಳಿ ತಾಲ್ಲೂಕಿನಲ್ಲಿ ಎತ್ತಿನ ಗಾಡಿಯಲ್ಲಿ ಮರಳು ಸಾಗಿಸುವವರ ವಿರುದ್ಧ ಮೊಕದ್ದಮೆ ದಾಖಲಾಗಿರುವುದು ಸರಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಎಷ್ಟು ಜನರ ವಿರುದ್ಧ ಮೊಕದ್ದಮೆ ದಾಖಲಾಗಿವೆ; ಯಾವ ಕಲಂನ ಅಡಿಯಲ್ಲಿ ಮೊಕದ್ದಮೆ ದಾಖಲು ಮಾಡಲಾಗಿದೆ; (ವಿವರ ನೀಡುವುದು) | ಹೊನ್ನಾಳಿ ತಾಲ್ಲೂಕಿನಲ್ಲಿ ಅಕ್ರಮವಾಗಿ ಎತ್ತಿನ ಗಾಡಿಯಲ್ಲಿ ಮರಳು ಸಾಗಾಣಿಕೆ ಅಡಿಯಲ್ಲಿ 06 ಜನರ ವಿರುದ್ಧ IPC 1860 ಕಲಂ:143, 114, 117, 379, 149ರಂತೆ FIR No: 0399/2018ರಂತೆ ಈ ಕಛೇರಿಯಿಂದ ಪ್ರಕರಣ ದಾಖಲಾಗಿಸಲಾಗಿರುತ್ತದೆ ಹಾಗೂ ಕಂದಾಯ ಇಲಾಖೆಯಿಂದ ಎತ್ತಿನ ಗಾಡಿಯಲ್ಲಿ ಮರಳು ಸಾಗಾಣಿಕೆ ಅಡಿಯಲ್ಲಿ ಒಟ್ಟು 27 ಜನರ ವಿರುದ್ಧ FIR No: 400/2018 & 401/2018ರಂತೆ 2 ಪ್ರಕರಣಗಳನ್ನು ದಾಖಲಿಸಲಾಗಿರುತ್ತದೆ. |
| ಈ) | ಮರಳು ಕ್ವಾರಿಯಲ್ಲಿ ಜೆ.ಸಿ.ಬಿ.ಯನ್ನು ಉಪಯೋಗಿಸಿ ಮರಳುಗಾರಿಕೆ ಮಾಡಲು ಸರ್ಕಾರವು ಅನುಮತಿ ನೀಡಿಲ್ಲವೆ; ನೀಡಿದ್ದರೆ ದಾವಣಗೆರೆ ಜಿಲ್ಲೆಗೆ ಮಾತ್ರ ಈ ನಿಯಮಗಳಿಗೆ ತದ್ವಿರುದ್ಧವಾಗಿ ಜಿಲ್ಲಾಧಿಕಾರಿಗಳು ನಿಯಮಗಳನ್ನು ರೂಪಿಸಿ ಜೆ.ಸಿ.ಬಿ. ಬಳಸದಿರಲು ಆದೇಶ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ; ಸರ್ಕಾರ ಯಾವ ಕ್ರಮ ಕೈಗೊಳ್ಳಲು ಚಿಂತಿಸಿದೆ; | ಪ್ರಶ್ನೆ (ಅ)ರ ಉತ್ತರದಲ್ಲಿ ವಿವರಿಸಿರುವಂತೆ ದಾವಣಗೆರೆ ಜಿಲ್ಲಾ ಮರಳು ಸಮಿತಿಯಿಂದ ಮರಳು ಗಣಿಗಾರಿಕೆಗೆ ಜೆ.ಸಿ.ಬಿ. ಬಳಕೆಯನ್ನು ನಿಷೇಧಿಸಲಾಗಿದೆ.<br>ಮರಳು ಬ್ಲಾಕ್ ಗಳ ವಿಲೇವಾರಿ ಸಂಬಂಧ ರಾಜ್ಯ ಸರ್ಕಾರವು ದಿನಾಂಕ:18.11.2016ರಂದು ಹೊರಡಿಸಿರುವ ಮಾರ್ಗಸೂಚಿಯಂತೆ, ನದಿ ಪಾತ್ರದಲ್ಲಿ ಮರಳು ಗಣಿಗಾರಿಕೆಯಲ್ಲಿ Mechanized Boats and Dredger ಗಳನ್ನು ಬಳಸುವುದು ನಿಷೇದಿಸಿದೆ ಮತ್ತು ಭಾರತ ಸರ್ಕಾರದ ಪರಿಸರ ಮಂತ್ರಾಲಯದಿಂದ ಕಾಲಕಾಲಕ್ಕೆ ಹೊರಡಿಸಬಹುದಾದ ಮಾರ್ಗಸೂಚಿಗಳು ಮತ್ತು ಅಧಿಸೂಚನೆಗಳಿಗೆ ಒಳಪಟ್ಟು ನದಿ ಪಾತ್ರದ ಮರಳು ಗಣಿಗಾರಿಕೆಗೆ JCB & Screeningನ್ನು ಬಳಸಲು ಅವಕಾಶ ಕಲ್ಪಿಸಿದೆ. ಆದರೆ River Bankಗೆ ಯಾವುದೇ ರೀತಿಯ ತೊಂದರೆಯಾಗದಂತೆ ಮರಳು ತುಂಬಲು ಜಂಪರ್ಸ್, ಟ್ರಾಕ್ಟರ್ ಮೌಂಟೆಡ್ ಲೋಡರ್ಸ್ ಬಳಸಲು ಅವಕಾಶ ಕಲ್ಪಿಸಿದೆ.<br>ಅದರಂತೆ, ಸಂಬಂಧಿಸಿದ ಪರಿಸರ ಆಘಾತ ಅಂದಾಜೀಕರಣ ಪ್ರಾಧಿಕಾರದಿಂದ ಮರಳು ಗಣಿಗಾರಿಕೆಗೆ JCB & Screeningನ್ನು ಬಳಸಲು ಅನುಮತಿ ಪಡೆದಂತಹ ಮರಳು ಬ್ಲಾಕ್ ಗಳಲ್ಲಿ ಮಾತ್ರ ಅನುಮತಿ ನೀಡಿದ ಯಂತ್ರೋಪಕರಣ ಬಳಸಬಹುದಾಗಿರುತ್ತದೆ. |
| ಉ) | ರಾಜ್ಯದಲ್ಲಿರುವ ಮರಳು ನೀತಿ ಎಲ್ಲಾ ಜಿಲ್ಲೆಗಳಿಗೂ ಅನ್ವಯವಾಗುವುದೇ; | ರಾಜ್ಯದಲ್ಲಿರುವ ಮರಳು ನೀತಿ ಎಲ್ಲಾ ಜಿಲ್ಲೆಗಳಿಗೂ ಅನ್ವಯವಾಗುತ್ತದೆ. |
| | ದಾವಣಗೆರೆ ಜಿಲ್ಲೆಗೆ ಮಾತ್ರ ಅವೈಜ್ಞಾನಿಕ ಮರಳು – ನೀತಿ ನಿಯಮಗಳನ್ನು ಜಿಲ್ಲಾಧಿಕಾರಿಗಳು ಸೃಷ್ಟಿಸುತ್ತಿರುವುದು ಸರ್ಕಾರದ ನೀತಿಗೆ ವಿರುದ್ಧವಲ್ಲವೇ; ಇದರ ಬಗ್ಗೆ ಸರ್ಕಾರದ ಕ್ರಮವೇನು; | ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ, 1994ರ ನಿಯಮ 31-Tರನ್ವಯ ಮತ್ತು ರಾಜ್ಯ ಸರ್ಕಾರವು ದಿನಾಂಕ:18.11.2016ರಂದು ಹೊರಡಿಸಿರುವ ಮಾರ್ಗಸೂಚಿಯಂತೆ, ನದಿ ಪಾತ್ರದಲ್ಲಿನ ಮರಳು ಬ್ಲಾಕ್‌ಗಳನ್ನು ವಿಲೇವಾರಿ ಮಾಡಲಾಗುತ್ತಿದೆ. |

ಸಂಖ್ಯೆ: ಸಿಐ 66 ಎಂಎಂಎನ್ 2019

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು.

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 321 |
| ಸದಸ್ಯರ ಹೆಸರು | : | ಶ್ರೀ ಕುಮಾರ ಬಂಗಾರಪ್ಪ. ಎಸ್ (ಸೊರಬ) |
| ಉತ್ತರಿಸಬೇಕಾದ ದಿನಾಂಕ | : | 12-02-2019 |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

| ಪ್ರಶ್ನೆ | ಉತ್ತರ |
|---|---|
| (ಅ) ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ದುರಸ್ತಿಯಲ್ಲಿರುವ ಶಾಲಾ ಕೊಠಡಿಗಳ ಸಂಖ್ಯೆ ಎಷ್ಟು; | ಸೊರಬ ತಾಲ್ಲೂಕಿನಲ್ಲಿ ಒಟ್ಟು 20 ಪ್ರಾಥಮಿಕ ಶಾಲೆಗಳ 37 ಕೊಠಡಿಗಳು ಹಾಗೂ 08 ಪ್ರೌಢ ಶಾಲೆಗಳ 22 ಕೊಠಡಿಗಳು ದುರಸ್ತಿಯಲ್ಲಿರುತ್ತವೆ. |
| (ಆ) ದುರಸ್ತಿಯಲ್ಲಿರುವ ಈ ಕೊಠಡಿಗಳನ್ನು ಸರಿಪಡಿಸಲು ಹಣವನ್ನು ಬಿಡುಗಡೆ ಮಾಡಲಾಗಿದೆಯೇ; | 2018-19ನೇ ಸಾಲಿನ ರಾಜ್ಯವಲಯ ಮುಂದುವರೆದ ಯೋಜನೆಯಡಿಯಲ್ಲಿ ಪ್ರಾಥಮಿಕ ಶಾಲೆಗಳ 05 ಕೊಠಡಿಗಳ ದುರಸ್ಥಿಗೆ ರೂ.7.86 ಲಕ್ಷ ಹಾಗೂ ಪ್ರೌಢ ಶಾಲೆಗಳ 08 ಕೊಠಡಿಗಳ ದುರಸ್ತಿಗಾಗಿ ರೂ.9.80 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ. |
| (ಇ) ಹೊಸ ಶಾಲಾ ಕೊಠಡಿಗಳನ್ನು ತೆರೆಯಲು ಮಂಜೂರಾತಿ ನೀಡಲು ಸರ್ಕಾರ ಕ್ರಮ ಕೈಗೊಂಡಿದೆಯೇ? | 2018-19ನೇ ಸಾಲಿನ ರಾಜ್ಯ ವಲಯ ಯೋಜನೆಯಡಿ ವಿವಿಧ ಲೆಕ್ಕ ಶೀರ್ಷಿಕೆಗಳಡಿಯಲ್ಲಿ ಸೊರಬ ತಾಲ್ಲೂಕಿಗೆ 29 ಪ್ರಾಥಮಿಕ ಶಾಲೆಗಳ 38 ಕೊಠಡಿಗಳ ನಿರ್ಮಾಣಕ್ಕಾಗಿ ರೂ.402.80 ಲಕ್ಷ ಹಾಗೂ 02 ಪ್ರೌಢ ಶಾಲೆಯ 03 ಕೊಠಡಿಗಳ ನಿರ್ಮಾಣಕ್ಕಾಗಿ ರೂ.47.25 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ. |

ಇಡಿ 40 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 594
ಸದಸ್ಯರ ಹೆಸರು : ಶ್ರೀಮತಿ ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ)
ಉತ್ತರಿಸಬೇಕಾದ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| ಅ) ಕಾರವಾರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಪ್ರೌಢ ಶಾಲಾ ಮಕ್ಕಳಿಗೆ ಶೈಕ್ಷಣಿಕ ವರ್ಷ ಮುಗಿಯುತ್ತಾ ಬಂದರೂ ಇದುವರೆಗೂ ಉಚಿತ ಸೈಕಲ್‌ಗಳನ್ನು ವಿತರಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿತರಣೆ ಬಹುತೇಕ ಮುಕ್ತಾಯಗೊಂಡಿದೆ. |
| ಆ) ಬಂದಿದ್ದಲ್ಲಿ, ವಿಳಂಬಕ್ಕೆ ಕಾರಣವೇನು; ಯಾವಾಗ ವಿತರಿಸಲಾಗುವುದು (ಸಂಪೂರ್ಣ ವಿವರ ನೀಡುವುದು)? | ವಿತರಿಸಲಾಗಿರುವ ಸೈಕಲ್‌ಗಳು ಗುಣಮಟ್ಟದಿಂದ ಕೂಡಿರುವುದಿಲ್ಲವೆಂದು ದೂರುಗಳು ಬಂದಿದ್ದರಿಂದ ಬೈಸಿಕಲ್‌ಗಳ ವಿತರಣೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿತ್ತು. ಪ್ರಸ್ತುತ, ಗುಣಮಟ್ಟ ತಪಾಸಣಾ ಸಂಸ್ಥೆಗಳ ವರದಿಯನ್ನಾಧರಿಸಿ, ಬೈಸಿಕಲ್ ವಿತರಣೆಯನ್ನು ಪುನರಾರಂಭಿಸಲಾಗಿದ್ದು, ಬಹುತೇಕ ಜಿಲ್ಲೆಗಳಲ್ಲಿ ವಿತರಣೆ ಪೂರ್ಣಗೊಂಡಿರುತ್ತದೆ. |

ಇಡಿ 30 ಯೋಯೋಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 322
ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ (ಸೊರಬ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದಲ್ಲಿರುವ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಲ್ಲಿ ಸಿ.ಸಿ. ಟಿವಿಯನ್ನು ಅಳವಡಿಸಲಾಗಿದೆಯೇ; | ಎಸ್.ಎಸ್.ಎಲ್.ಸಿ ಮತ್ತು ಪದವಿ ಪೂರ್ವ ಪರಿಕ್ಷಾ ಕೇಂದ್ರಗಳಾಗಿ ಆಯ್ಕೆಯಾಗಿರುವ ಸರ್ಕಾರಿ ಶಾಲೆಗಳಲ್ಲಿ ಸಿ.ಸಿ ಕ್ಯಾಮರಾ ಅಳವಡಿಸಲಾಗಿದೆ. |
| (ಆ) ಇ-ಹಾಜರಾತಿಯನ್ನು ಶಿಕ್ಷಕರಿಗೆ ಹಾಗೂ ಮಕ್ಕಳಿಗೆ ಸಹ ಅಳವಡಿಸಲಾಗಿದೆಯೇ; | ಇಲ್ಲ. |
| (ಇ) ಹಾಗಿಲ್ಲದಿದ್ದಲ್ಲಿ, ಶಾಲೆಗಳಲ್ಲಿ ಸಿ.ಸಿ. ಟಿವಿ ಹಾಗೂ ಇ-ಹಾಜರಾತಿಯನ್ನು ಅಳವಡಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ? | ಹಂತ ಹಂತವಾಗಿ ಸರ್ಕಾರಿ ಶಾಲೆಗಳಲ್ಲಿ ಸಿ.ಸಿ. ಟಿವಿ ಹಾಗೂ ಇ-ಹಾಜರಾತಿಯ ದಾಖಲೆಗೆ ಬಯೋಮೆಟ್ರಿಕ್ ಸಾಧನ ಅಳವಡಿಸುವ ಬಗ್ಗೆ ಕ್ರಮವಹಿಸಲಾಗುತ್ತಿದೆ. |

ಇಡಿ 28 ಯೋಯೋಕ 2019

(ಹೆಚ್.ಡಿ. ಕುಮಾರಸ್ವಾಮಿ)
ಮುಖ್ಯ ಮಂತ್ರಿಗಳು

# ಕರ್ನಾಟಕ ವಿಧಾನ ಸಭೆ

| | | |
|---|---|---|
| 1. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 754 |
| 2. | ಸದಸ್ಯರ ಹೆಸರು | : ಶ್ರೀ ಬಿ.ಸಿ.ನಾಗೇಶ್ (ತಿಪಟೂರು) |
| 3. | ಉತ್ತರಿಸುವ ದಿನಾಂಕÀ | : 12.02.2019 |
| 4. | ಉತ್ತರಿಸುವ ಸಚಿವರು | : ಮಾನ್ಯ ಮುಖ್ಯ ಮಂತ್ರಿಗಳು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 3 ವರ್ಷಗಳಿಂದ ಸಕಾಲ ಯೋಜನೆಯಲ್ಲಿ ನಾಗರೀಕರಿಂದ ಪರಿಹಾರ ಕೋರಿ ಸ್ವೀಕೃತವಾದ ಅರ್ಜಿಗಳ ಸಂಖ್ಯೆ ಎಷ್ಟು; ಇದುವರೆವಿಗೂ ಎಷ್ಟು ಅರ್ಜಿಗಳಿಗೆ ಪರಿಹಾರ ಒದಗಿಸಲಾಗಿದೆ; ಪರಿಹಾರ ಒದಗಿಸದಿದ್ದಲ್ಲಿ ಕಾರಣವೇನು; ಪರಿಹಾರ ನೀಡಿದ ಮೊತ್ತದ ಪೈಕಿ ಎಷ್ಟು ಮೊತ್ತವನ್ನು ಅಧಿಕಾರಿಗಳಿಂದ ವಸೂಲಿ ಮಾಡಲಾಗಿದೆ; ಮಾಡದಿದ್ದಲ್ಲಿ ಕಾರಣವೇನು; | ಕಳೆದ 03 ವರ್ಷಗಳಲ್ಲಿ ಸಕಾಲ ಯೋಜನೆಯಡಿಯಲ್ಲಿ ನಾಗರೀಕರಿಂದ ಪರಿಹಾರ ಕೋರಿ ಒಟ್ಟು 1819 ಅರ್ಜಿಗಳು ಸ್ವೀಕೃತವಾಗಿವೆ.<br><br>ಅವುಗಳ ಪೈಕಿ ದಿ:08.02.2019ರವರೆಗೆ ಒಟ್ಟು 357 ಅರ್ಜಿಗಳಿಗೆ ಪರಿಹಾರ ಒದಗಿಸಲಾಗಿದೆ. ರೂ.40,580/-ಗಳಷ್ಟು ಪರಿಹಾರವನ್ನು ನೀಡಲಾಗಿದ್ದು, ಈ ಮೊತ್ತದ ಪೈಕಿ ಈವರೆವಿಗೆ ರೂ.18,660/-ಗಳನ್ನು ವಸೂಲಿ ಮಾಡಲಾಗಿದೆ. ಉಳಿದ ಮೊತ್ತ ವಸೂಲಾತಿ ಪ್ರಕ್ರಿಯೆಯು ಸಕ್ಷಮ ಅಧಿಕಾರಿ / ಮೇಲ್ಮನವಿ ಪ್ರಾಧಿಕಾರ ಬಳಿ ಬಾಕಿ ಇರುತ್ತದೆ. |
| ಆ) | ಸಕಾಲ ಯೋಜನೆಯಡಿ ಎರಡನೇ ಮೇಲ್ಮನವಿ ಪ್ರಾಧಿಕಾರಕ್ಕೆ ಪರಿಹಾರ ಕೋರಿ ಸಲ್ಲಿಸಿದ ಅರ್ಜಿಗೆ ಪ್ರಾಧಿಕಾರಿಯು ಪರಿಹಾರ ನೀಡಲು ವಿಫಲವಾದಲ್ಲಿ ಅವರನ್ನು ಶಿಕ್ಷಿಸುವ ಅಧಿಕಾರ ಯಾರಿಗಿದೆ. | ಎರಡನೇ ಮೇಲ್ಮನವಿ ಪ್ರಾಧಿಕಾರಿ / ಮೇಲ್ಮನವಿ ಪ್ರಾಧಿಕಾರಿಯು ಕೇವಲ ಆತನು ನಿರ್ಧರಿಸಬಹುದಾದ ಅವಧಿಯೊಳಗೆ ಸೇವೆಯನ್ನು ಒದಗಿಸಲು ಆದೇಶಿಸಬಹುದು ಅಥವಾ ಮೇಲ್ಮನವಿಯನ್ನು ತಿರಸ್ಕರಿಸಬಹುದು. |
| ಇ) | ಸಕಾಲ ಯೋನೆಯಡಿ ಎರಡನೇ ಮೇಲ್ಮನವಿ ಪ್ರಾಧಿಕಾರಿಯು ಮಾಡಿದ ಕರ್ತವ್ಯ ನಿರ್ಲಕ್ಷತೆ ಬಗ್ಗೆ ಅವರಿಗೆ ದಂಡ ವಿಧಿಸಲು ಸರ್ಕಾರದ ಮಟ್ಟದಲ್ಲಿ ಯಾವ ವ್ಯವಸ್ಥೆ ಇದೆ; ಇದ್ದಲ್ಲಿ ಇದುವರೆವಿಗೂ ಎಷ್ಟು ಅಧಿಕಾರಿಗಳಿಗೆ ದಂಡ ವಿಧಿಸಲಾಗಿದೆ; ವಿಧಿಸದಿದ್ದಲ್ಲಿ ಕಾರಣವೇನು; | ಎರಡನೇ ಮೇಲ್ಮನವಿ ಅಧಿಕಾರಿ/ಮೇಲ್ಮನವಿ ಪ್ರಾಧಿಕಾರಿಯು ಪರಿಹಾರ ಕೋರಿ ಬಂದ ಮೇಲ್ಮನವಿ ಅರ್ಜಿಗಳ ವಿಲೇವಾರಿ ಪ್ರಕ್ರಿಯೆ ನಿರ್ವಹಿಸುತ್ತಾರೆ. ಸದರಿಯವರಿಗೆ ಸಕಾಲ ಅಧಿನಿಯಮದಡಿ ದಂಡ ವಿಧಿಸಲು ಸಕಾಲ ಕಾಯ್ದೆಯಡಿ ಅವಕಾಶವಿರುವುದಿಲ್ಲ. |
| ಈ) | ಸಕಾಲ ಕಾಯ್ದೆಯ ಕಲಂ 8 ಮತ್ತು 9 ರಡಿ ನಾಗರೀಕರು ಅರ್ಜಿಯಲ್ಲಿ ಕೋರಿದ ಸೇವೆ ಒದಗಿಸದಿದ್ದಾಗ ಅರ್ಜಿದಾರರು ವಿಳಂಬ ಅವಧಿಗೆ ಪರಿಹಾರ ಪಡೆಯಲು ಅರ್ಹರಾಗಿರುತ್ತಾರೆಂದು | ಸಕಾಲ ಕಾಯ್ದೆಯ ಕಲಂ 8 ರಡಿಯಲ್ಲಿ ಸೇವೆ ಒದಗಿಸುವ ವಿಳಂಬ ಅಥವಾ ಕರ್ತವ್ಯ ಲೋಪದ ಸಂದರ್ಭದಲ್ಲಿ ಸಕಾಲ ಅಧಿನಿಯಮದಡಿಯಲ್ಲಿ ಪರಿಹಾರ ವೆಚ್ಚವನ್ನು ಕೋರಲು ಹಕ್ಕುಳ್ಳವನಾಗಿರತಕ್ಕದ್ದು ಎಂದು |

| ತಿಳಿಸಲಾಗಿದೆ. ಈ ದ್ವಂದ್ವನೀತಿಗೆ ಕಾರಣಗಳೇನು. ಈ ನೀತಿಯನ್ನು ಬದಲಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು? | ತಿಳಿಸಿಲಾಗಿದೆ.<br>ಅಧಿನಿಯಮದ ಕಲಂ 9ರಲ್ಲಿ ಸೇವೆ ನೀಡಲು ವಿಫಲನಾದ ಹೆಸರಿಸಲಾದ ಅಧಿಕಾರಿ ಅಥವಾ ಆತನ ಅಧೀನದಲ್ಲಿರುವ ಸಾರ್ವಜನಿಕ ನೌಕರರ ವಿಳಂಬದ ಅವಧಿಗೆ ಅರ್ಜಿಯೊಂದಕ್ಕೆ ಗರಿಷ್ಠ 500 ರೂಪಾಯಿಗಳಿಗೆ ಒಳಪಟ್ಟು ದಿನವೊಂದಕ್ಕೆ 20 ರೂಪಾಯಿಗಳಂತೆ, ಅದನ್ನು ನೀಡುವುದಕ್ಕಾಗಿ ಸರ್ಕಾರದಿಂದ ನಿಷೇಧ ಅಥವಾ ನಿರ್ಬಂಧ ಇಲ್ಲದಿದ್ದರೆ ಸಂದಾಯ ಮಾಡಲು ಬದ್ಧನಾಗಿರತಕ್ಕದ್ದು ಎಂದು ತಿಳಿಸಲಾಗಿದೆ. ಇದರಲ್ಲಿ ಯಾವುದೇ ದ್ವಂದ್ವ ನೀತಿ ಇರುವುದಿಲ್ಲ. |
|---|---|

ಸಂಖ್ಯೆ: ಸಿಆಸುಇ 30 ನಾಸೇಖಾ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯ ಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 715
ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ. (ಕುಂದಾಪುರ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ಗ್ರಾಮ ಪಂಚಾಯಿತಿಗೊಂದು ಕೇಂದ್ರೀಯ ಶಾಲೆ ಪರಿಕಲ್ಪನೆಯಂತೆ, ಗ್ರಾಮ ಪಂಚಾಯತ್ ವ್ಯಾಪ್ತಿಯ ಎಲ್ಲಾ ಶಾಲೆಗಳನ್ನೂ ಒಗ್ಗೂಡಿಸಿ, ಒಂದು ಕೇಂದ್ರ ಶಾಲೆಯನ್ನು ಗುರುತಿಸಿ ಸದರಿ ಶಾಲೆಗೆ ಎಲ್ಲಾ ಮೂಲಭೂತ ಸೌಕರ್ಯಗಳನ್ನು (ಕುಡಿಯುವ ನೀರು, ಶೌಚಾಲಯ, ವ್ಯವಸ್ಥಿತ ಕೊಠಡಿ, ಬಿಸಿಯೂಟ, ವಾಹನ ವ್ಯವಸ್ಥೆ ಹಾಗೂ ಶಿಕ್ಷಕ ವೃಂದವನ್ನು) ಒದಗಿಸಿ ಉತ್ತಮ ಶಿಕ್ಷಣ ನೀಡುವ ಬಗ್ಗೆ ಸರ್ಕಾರ ಆಸಕ್ತಿ ಹೊಂದಿದೆಯೇ? | ಹೌದು.<br><br>ಈ ಉದ್ದೇಶದಿಂದಲೇ, 2017-18ನೇ ಸಾಲಿನಲ್ಲಿ 176 ಹಾಗೂ 2018-19ನೇ ಸಾಲಿನಲ್ಲಿ 100 'ಕರ್ನಾಟಕ ಪಬ್ಲಿಕ್ ಶಾಲೆ'ಗಳನ್ನು ಪ್ರಾರಂಭಿಸಲಾಗಿದ್ದು, 2019-20ನೇ ಸಾಲಿನ ಆಯವ್ಯಯ ಭಾಷಣದಲ್ಲಿ 1000 'ಕರ್ನಾಟಕ ಪಬ್ಲಿಕ್ ಶಾಲೆ'ಗಳನ್ನು ಕೇಂದ್ರೀಯ ವಿದ್ಯಾಲಯದ ಮಾದರಿಯಲ್ಲಿ ಪ್ರಾರಂಭಿಸಲು ಘೋಷಿಸಲಾಗಿದೆ. |

ಇಡಿ 47 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 67
ಸದಸ್ಯರ ಹೆಸರು : ಶ್ರೀ ಉಮಾನಾಥ ಎ.ಕೋಟ್ಯಾನ್ (ಮೂಡಬಿದ್ರೆ)
ಉತ್ತರಿಸಬೇಕಾದ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| ಅ) ರಾಜ್ಯದಲ್ಲಿನ ಸರ್ಕಾರಿ ಪ್ರೌಢಶಾಲಾ ಮಕ್ಕಳಿಗೆ ಒದಗಿಸಿಕೊಡುತ್ತಿರುವ ಸೌಲಭ್ಯಗಳು ಸಕಾಲಿಕ ಮತ್ತು ಸುವ್ಯವಸ್ಥಿತವಾಗಿ ತಲುಪಿಸುವ ಮೂಲಕ ಶಾಲಾ ಮಕ್ಕಳಲ್ಲಿ ಶೈಕ್ಷಣಿಕ ಅಭಿವೃದ್ಧಿಗೆ ನೆರವಾಗುವ ದಿಶೆಯಲ್ಲಿ ಸರ್ಕಾರದ ಕ್ರಮಗಳೇನು; | ರಾಜ್ಯದಲ್ಲಿನ ಸರ್ಕಾರಿ ಪ್ರೌಢಶಾಲಾ ಮಕ್ಕಳಿಗೆ ಪ್ರಮುಖವಾಗಿ ಮಧ್ಯಾಹ್ನದ ಬಿಸಿಯೂಟ, ಕ್ಷೀರಭಾಗ್ಯ ಯೋಜನೆಯಡಿ ಹಾಲು, ಸಮವಸ್ತ್ರ, ಶೂ & ಸಾಕ್ಸ್, ಉಚಿತ ಪಠ್ಯಪುಸ್ತಕ ಹಾಗೂ 8ನೇ ತರಗತಿ ಮಕ್ಕಳಿಗೆ ಬೈಸಿಕಲ್ ಮೊದಲಾದ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ಇವುಗಳನ್ನು ಸಕಾಲಿಕವಾಗಿ ಮತ್ತು ಸುವ್ಯವಸ್ಥಿತವಾಗಿ ತಲುಪಿಸುವ ಉದ್ದೇಶದಿಂದ ಸಾಕಷ್ಟು ಮುಂಚಿತವಾಗಿ ಪ್ರಸ್ತಾವನೆ ಪಡೆದು ನಿಯಮಾನುಸಾರ ಸಚಿವ ಸಂಪುಟದ ಅನುಮೋದನೆ ಪಡೆದು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. |
| ಆ) 2016ನೇ ಸಾಲಿನಿಂದ ಪ್ರಾರಂಭಗೊಂಡ ಸೈಕಲ್ ವಿತರಣೆಯಲ್ಲಿ ಉಂಟಾಗುತ್ತಿರುವ ಲೋಪದೋಷಗಳು ಹಾಗೂ ವಿಳಂಬವನ್ನು ತಪ್ಪಿಸಲು ಸರ್ಕಾರದ ಕ್ರಮಗಳೇನು; | ಸೈಕಲ್ ವಿತರಣೆಯಲ್ಲಿ ಉಂಟಾಗುತ್ತಿರುವ ಲೋಪದೋಷಗಳು ಹಾಗೂ ವಿಳಂಬವನ್ನು ತಪ್ಪಿಸಲು ಟೆಂಡರ್ ದಸ್ತಾವೇಜಿನ ನಿಯಮಗಳನ್ವಯ ಬೈಸಿಕಲ್‌ಗಳ ತಯಾರಿಕೆ ಹಂತದಲ್ಲಿ ಹಾಗೂ ಮಕ್ಕಳಿಗೆ ವಿತರಣೆ ಮಾಡಿದ ನಂತರ ಬೈಸಿಕಲ್‌ಗಳ ಗುಣಮಟ್ಟದ ಬಗ್ಗೆ Visual Inspection ಹಾಗೂ Crash Test ಗಳನ್ನು ಮೂರನೇ ಸಂಸ್ಥೆಯಾದ ಆರ್ ಅಂಡ್ ಡಿ ಸೆಂಟರ್ ಫಾರ್ ಬೈಸಿಕಲ್ ಅಂಡ್ ಸಿವಿಂಗ್ ಮೆಷಿನ್, ಲೂಧಿಯಾನ, ಪಂಜಾಬ್ ಇವರಿಂದ ಪರಿಶೀಲನೆಯನ್ನು ಮಾಡಿಸಿ ವರದಿಯನ್ನು ಪಡೆಯಲಾಗುತ್ತಿದೆ.<br><br>ವಿಳಂಬವನ್ನು ತಪ್ಪಿಸುವ ಉದ್ದೇಶದಿಂದ ಹಿಂದಿನ ಶೈಕ್ಷಣಿಕ ವರ್ಷದಲ್ಲಿಯೇ ಸಾಕಷ್ಟು ಮುಂಚಿತವಾಗಿ ಪ್ರಸ್ತಾವನೆ ಪಡೆದು ಸಚಿವ ಸಂಪುಟದ ಅನುಮೋದನೆ ಯೊಂದಿಗೆ, ನಿಯಮಾನುಸಾರ ಟೆಂಡರ್ ಪ್ರಕ್ರಿಯೆ ನಡೆಸಿ, ಯೋಜನೆಯನ್ನು ಸಕಾಲದಲ್ಲಿ ಅನುಷ್ಠಾನಗೊಳಿಸ ಲಾಗುತ್ತಿದೆ. |
| ಇ) ಸೈಕಲ್ ವಿತರಣೆಯಲ್ಲಿ ಗುಣಮಟ್ಟದ ಕೊರತೆ ಇಲ್ಲದಂತೆ ಪೂರ್ವಬಾವಿ ಕ್ರಮಗಳನ್ನು ಜರುಗಿಸುವ ಮತ್ತು ಜರುಗಿಸಿದ್ದರೂ ಗುಣಮಟ್ಟದ ಕೊರತೆ ಕಂಡುಬರುವ ಹಾಗೂ ವ್ಯವಸ್ಥೆಯ ಹೊಣೆಗಾರಿಕೆಯ ವಿಫಲತೆಯನ್ನು ಗುರುತಿಸಿ ಸರ್ಕಾರದ ಯೋಜನಾ ಸೌಲಭ್ಯಗಳು ವಿದ್ಯಾರ್ಥಿಗಳಿಗೆ ತಲುಪುವಂತೆ ನೋಡಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರದ ಪರಿಣಾಮಕಾರಿ ಕ್ರಮಗಳೇನು? | ಸೈಕಲ್ ವಿತರಣೆಯಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳಲು ಬ್ಲಾಕ್ ಹಂತದಲ್ಲಿ ಬೈಸಿಕಲ್‌ಗಳ ಜೋಡಣೆಯ ಕಾರ್ಯ ನಡೆಯುವ ಸಂದರ್ಭದಲ್ಲಿ ಪರಿಶೀಲನೆ ಮಾಡಲು ವಿವಿಧ ಹಂತಗಳಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅಧಿಕಾರಿಗಳ ತಂಡಗಳನ್ನು ರಚಿಸಲಾಗಿರುತ್ತದೆ. ಸದರಿ ಪರಿಶೀಲನಾ ತಂಡವು ಬೈಸಿಕಲ್‌ಗಳ ಜೋಡಣೆಯನ್ನು ಪರಿಶೀಲಿಸಿದ ನಂತರ ಪ್ರತಿ ಶಾಲಾ ಮಟ್ಟದಲ್ಲಿ ಎಸ್.ಡಿ.ಎಂ.ಸಿ. ಸದಸ್ಯರು, ಶಾಲಾ ಮುಖ್ಯ ಶಿಕ್ಷಕರು ಹಾಗೂ ಸ್ಥಳೀಯ ಸರ್ಕಾರಿ ನೌಕರರನ್ನು ಒಳಗೊಂಡ ಸಮಿತಿಯನ್ನು ರಚಿಸಿಕೊಂಡು ಬೈಸಿಕಲ್‌ಗಳ ಗುಣಮಟ್ಟ |

| | |
|---|---|
| | ಹಾಗೂ ಜೋಡಣೆ ಸರಿಯಾಗಿರುವುದನ್ನು ಖಾತ್ರಿ ಪಡಿಸಿಕೊಂಡು ನಂತರ ಶಾಲಾ ಮಕ್ಕಳಿಗೆ ವಿತರಣೆ ಮಾಡಲು ತಿಳಿಸಲಾಗಿದ್ದು, ಅದರಂತೆ ಶಾಲಾ ಹಂತದಲ್ಲಿ ಪರಿಶೀಲಿಸಿಕೊಂಡು ವಿತರಣೆ ಮಾಡಲಾಗುತ್ತಿದೆ.<br>ಸೈಕಲ್ ವಿತರಣೆಯಲ್ಲಿ ಉಂಟಾಗುತ್ತಿರುವ ಲೋಪದೋಷಗಳು ಹಾಗೂ ವಿಳಂಬವನ್ನು ತಪ್ಪಿಸಲು ಟೆಂಡರ್ ದಸ್ತಾವೇಜಿನ ನಿಯಮಗಳನ್ವಯ ಬೈಸಿಕಲ್‌ಗಳ ತಯಾರಿಕೆ ಹಂತದಲ್ಲಿ ಹಾಗೂ ಮಕ್ಕಳಿಗೆ ವಿತರಣೆ ಮಾಡಿದ ನಂತರ ಬೈಸಿಕಲ್‌ಗಳ ಗುಣಮಟ್ಟದ ಬಗ್ಗೆ Visual Inspection ಹಾಗೂ Crash Test ಗಳನ್ನು ಮೂರನೇ ಸಂಸ್ಥೆಯಾದ ಆರ್ ಅಂಡ್ ಡಿ ಸೆಂಟರ್ ಫಾರ್ ಬೈಸಿಕಲ್ ಅಂಡ್ ಸಿವಿಂಗ್ ಮೆಷಿನ್, ಲೂದಿಯಾನ ಇವರಿಂದ ಪರಿಶೀಲನೆಯನ್ನು ಮಾಡಿಸಿ ವರದಿಯನ್ನು ಪಡೆಯಲಾಗುತ್ತಿದೆ. ಇನ್ನು ಮುಂದೆ ಐಎಸ್ಐ ಮಾನದಂಡಗಳನ್ನು ಕಟ್ಟುನಿಟ್ಟಾಗಿ ಪಾಲಿಸಲೂ ಸಹ ಉದ್ದೇಶಿಸಿದೆ. |

ಇಡಿ 31 ಯೋಯೋಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 569 |
| ಸದಸ್ಯರ ಹೆಸರು | : | ಶ್ರೀ ವೀರಭದ್ರಯ್ಯ ಎಂ.ವಿ.(ಮಧುಗಿರಿ) |
| ಉತ್ತರಿಸಬೇಕಾದ ದಿನಾಂಕ | : | 12-02-2019 |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

| ಪ್ರಶ್ನೆ | | ಉತ್ತರ |
|---|---|---|
| (ಅ) | ಮಧುಗಿರಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿರುವ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) | ಬಂದಿದ್ದಲ್ಲಿ, ಎಷ್ಟು ಶಾಲೆಗಳು ಶಿಥಿಲಾವಸ್ಥೆಯಲ್ಲಿವೆ; ಶಾಲಾ ಕಟ್ಟಡಗಳ ದುರಸ್ಥಿಗೆ ಅಥವಾ ಹೊಸ ಕಟ್ಟಡಗಳ ನಿರ್ಮಾಣಕ್ಕೆ ಅನುದಾನ ಒದಗಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; | ಮಧುಗಿರಿ ವಿಧಾನ ಸಭಾ ಕ್ಷೇತ್ರದಲ್ಲಿ 62 ಪ್ರಾಥಮಿಕ ಮತ್ತು 07 ಪ್ರೌಢ ಶಾಲೆಗಳಲ್ಲಿ ಒಟ್ಟು 98 ಕೊಠಡಿಗಳು ಶಿಥಿಲಾವಸ್ಥೆಯಲ್ಲಿರುತ್ತವೆ. ಶಾಲಾ ಕಟ್ಟಡಗಳ ದುರಸ್ಥಿ ಮತ್ತು ಹೊಸ ಕಟ್ಟಡಗಳ ನಿರ್ಮಾಣಕ್ಕೆ ಅನುದಾನ ಒದಗಿಸಲಾಗುತ್ತಿದೆ. |
| (ಇ) | ಇದ್ದಲ್ಲಿ, ಯಾವಾಗ ಮತ್ತು ಎಷ್ಟು ಅನುದಾನ ಒದಗಿಸಲಾಗುವುದು (ಸಂಪೂರ್ಣ ವಿವರ ನೀಡುವುದು) | 2018-19ನೇ ಸಾಲಿನಲ್ಲಿ ರೂ.41008.34 ಲಕ್ಷಗಳನ್ನು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ದುರಸ್ಥಿ ಹಾಗೂ ನೂತನ ಕೊಠಡಿಗಳ ನಿರ್ಮಾಣಕ್ಕಾಗಿ ಬಿಡುಗಡೆ ಮಾಡಲಾಗಿದೆ. ಮುಂದಿನ ವರ್ಷಗಳಲ್ಲಿ, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಹಂಚಿಕೆ ಮಾಡಲಾಗುವ ಅನುದಾನದಲ್ಲಿ, ಅಗತ್ಯತೆಗನುಗುಣವಾಗಿ ಅನುದಾನದ ಲಭ್ಯತೆಯನ್ನಾಧರಿಸಿ, ಹಂತ ಹಂತವಾಗಿ ಶಾಲಾ ಕಟ್ಟಡಗಳ ದುರಸ್ಥಿ ಹಾಗೂ ಹೊಸ ಕಟ್ಟಡಗಳ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ. |

ಇಡಿ 43 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 850
2. ಸದಸ್ಯರ ಹೆಸರು : ಶ್ರೀ ಭರತ್ ಶೆಟ್ಟಿ ವೈ.ಡಾ॥ (ಮಂಗಳೂರು ನಗರ ಉತ್ತರ)
3. ಉತ್ತರಿಸುವ ದಿನಾಂಕA : 12.02.2019
4. ಉತ್ತರಿಸುವ ಸಚಿವರು : ಮಾನ್ಯ ಮುಖ್ಯ ಮಂತ್ರಿಗಳು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಯಲಲಿ ಸಕಾಲ ಯೋಜನೆ ಎಂದಿನಿಂದ ಪ್ರಾರಂಭಗೊಂಡಿದೆ; | ರಾಜ್ಯ ಸರ್ಕಾರವು ಸಕಾಲ ಯೋಜನೆಯನ್ನು ದಿ: **02.04.2012** ರಿಂದ ಜಾರಿ ಮಾಡಿದೆ. |
| ಆ) | ಈ ಯೋಜನೆಯಡಿಯಲ್ಲಿ ಕಳೇದ 3 ವರ್ಷಗಳಿಂದ ಬಂದ ಅರ್ಜಿಗಳ ಸಂಖ್ಯೆ ಎಷ್ಟು; (ದಕ್ಷಿಣ ಕನ್ನಡ ಜಿಲ್ಲಾ ವಿಧಾನ ಸಭಾ ಕ್ಷೇತ್ರವಾರು ವಿವರ ನೀಡುವುದು). | 'ಈ ಯೋಜನೆಯಡಿಯಲ್ಲಿ ಕಳೆದ 3 ವರ್ಷಗಳಿಂದ ಬಂದ ವಿಧಾನ ಸಭಾ ಕ್ಷೇತ್ರವಾರು ಅರ್ಜಿಗಳ ಸಂಖ್ಯೆಯನ್ನು ಅನುಬಂಧ-**1** ರಲ್ಲಿ ಲಗತ್ತಿಸಿದೆ. |
| ಇ) | ಸಕಾಲದಡಿಯಲ್ಲಿ ಕಡತಗಳನ್ನು ವಿಲೇವಾರಿ ಮಾಡದ ಅಧಿಕಾರಿಗಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಹೌದು. ಸಕಾಲ ಯೋಜನೆಯಡಿಯಲ್ಲಿ ಬಾಕಿ ಇರುವ ಅರ್ಜಿಗಳ ಪಟ್ಟಿಯ ವಿವರವನ್ನು ಅನುಬಂಧ-**2**ರಲ್ಲಿ ಒದಗಿಸಲಾಗಿದೆ. |
| ಈ) | ಹಾಗಿದ್ದಲ್ಲಿ, ಅಂತಹವರ ವಿರುದ್ಧ ಸರ್ಕಾರ ಕೈಗೊಂಡ ಕ್ರಮಗಳೇನು? | ಇನ್ನು ಮುಂದೆ ಸಕಾಲ ಅರ್ಜಿಗಳು ಅವಧಿ ಮೀರಿ ವಿಲೇಯಾಗದೆ ಉಳಿಯದಂತೆ ಸಂಬಂಧಪಟ್ಟ ಅಧಿಕಾರಿಗಳಿಗೆ ನಿರ್ದೇಶನ ನೀಡಿ ಹಾಗೂ ಸೇವೆಯ ವಿಲೇವಾರಿಯಲ್ಲಿ ನಿರಂತರವಾಗಿ ವಿಳಂಬವೆಸಗುವ ಅಧಿಕಾರಿಗಳ ಮೇಲೆ ಸೂಕ್ತ ಕ್ರಮ ಕೈಗೊಳ್ಳುವಂತೆ ಸೂಚಿಸಿ ರಾಜ್ಯದ ಪ್ರಾದೇಶಿಕ ಆಯುಕ್ತರುಗಳಿಗೆ ದಿ: **21.01.2019**ರಂದು ನಿರ್ದೇಶನ ನೀಡಿ ಪತ್ರ ಬರೆಯಲಾಗಿದೆ. |

ಸಂಖ್ಯೆ: ಸಿಆಸುಇ 31 ನಾಸೇಖಾ 2019

**(ಹೆಚ್.ಡಿ.ಕುಮಾರಸ್ವಾಮಿ)**
ಮುಖ್ಯ ಮಂತ್ರಿ

ಅನುಬಂಧ -1

| Dakshinakanna Assembly Wise receipt details | | |
|---|---|---|
| Sno. | Assembly Name | Total Reciept |
| 1 | Moodabidri | 121677 |
| 2 | Mangalore City South | 1206341 |
| 3 | Bantwal | 312335 |
| 4 | Puttur | 393058 |
| 5 | Sullia | 155235 |
| 6 | Belthangady | 229500 |
| 7 | Mangalore City North | 48462 |
| 8 | Mangalore | 14692 |
| Total | | **2481300** |

Additional Mission Director-2, Sakala Mission
DPAR (e-Gov)

ಅನುಬಂಧ-2

| ಇಲಾಖವಾರು ಅವಧಿಮೀರಿ ಬಾಕಿ ಇರುವ ಅರ್ಜಿಗಳ ಪಟ್ಟಿ | | |
|---|---|---|
| ಕ್ರ.ಸಂ. | ಮುಖ್ಯ ಇಲಾಖೆ | ನಿಗದಿ ಪಡಿಸಿದ ದಿನಾಂಕದ ನಂತರ ಬಾಕಿ ಇರುವ ಅರ್ಜಿಗಳ ಸಂಖ್ಯೆ |
| 1 | ಕಂದಾಯ ಇಲಾಖೆ | 17805 |
| 2 | ನಗರಾಭಿವೃದ್ಧಿ ಇಲಾಖೆ | 4004 |
| 3 | ಕಂದಾಯ ಇಲಾಖೆ(IGRS) | 1118 |
| 4 | ಒಳಾಡಳಿತ ಇಲಾಖೆ | 933 |
| 5 | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ | 548 |
| 6 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ | 303 |
| 7 | ಕನ್ನಡ ಮತ್ತು ಸಂಸ್ಕೃತಿ ಇಲಾಖೆ | 249 |
| 8 | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ (ಪರಿಸರ) ಇಲಾಖೆ | 227 |
| 9 | ಸಾರಿಗೆ ಇಲಾಖೆ | 157 |
| 10 | ನಗರಾಭಿವೃದ್ಧಿ ಇಲಾಖೆ (ಪೌರಾಡಳಿತ ಮತ್ತು ನಗರಾಭಿವೃದ್ಧಿ ಪ್ರಾಧಿಕಾರಗಳು) | 112 |
| 11 | ಇಂಧನ ಇಲಾಖೆ | 97 |
| 12 | ಆಹಾರ, ನಾಗರೀಕ ಸರಬರಾಜು, ಗ್ರಾಹಕರ ವ್ಯವಹಾರಗಳು ಮತ್ತು ಕಾನೂನು ಮಾಪನಶಾಸ್ತ್ರ ಇಲಾಖೆ | 93 |
| 13 | ಕಾರ್ಮಿಕ ಇಲಾಖೆ | 90 |
| 14 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | 89 |
| 15 | ಪಶುಪಾಲನಾ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ | 74 |
| 16 | ಸಹಕಾರ ಇಲಾಖೆ | 38 |
| 17 | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ | 36 |
| 18 | ಉನ್ನತ ಶಿಕ್ಷಣ ಇಲಾಖೆ | 24 |
| 19 | ಸಣ್ಣ ನೀರಾವರಿ ಮತ್ತು ಅಂತರ್ಜಲ ಅಭಿವೃದ್ಧಿ ಇಲಾಖೆ ಅಂತರ್ಜಲ ನಿರ್ದೇಶನಾಲಯ | 19 |
| 20 | ಲೋಕೋಪಯೋಗಿ,ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ | 11 |
| 21 | ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ಗಣಿ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು) | 6 |
| 22 | ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | 2 |
| 23 | ಯುವ ಸಬಲೀಕರಣ ಮತ್ತು ಕ್ರೀಡೆ ಇಲಾಖೆ | 1 |
| 24 | ಆರ್ಥಿಕ ಇಲಾಖೆ | 1 |
| 25 | ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ | 1 |
| 26 | ಜಲ ಸಂಪನ್ಮೂಲ ಇಲಾಖೆ | 1 |
| 27 | ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ | 0 |
| 28 | ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ | 0 |
| 29 | ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ | 0 |
| 30 | ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ | 0 |
| 31 | ವಸತಿ ಇಲಾಖೆ | 0 |
| | ಒಟ್ಟು | **26039** |

11/02/19

Additional Mission Director-2, Sakala Mission
DPAR (e-Gov)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 593
ಸದಸ್ಯರ ಹೆಸರು : ಶ್ರೀಮತಿ ರೂಪಾಲಿ ಸಂತೋಷ್ ನಾಯ್ಕ್ (ಕಾರವಾರ)
ಉತ್ತರಿಸಬೇಕಾದ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
| --- | --- |
| ಅ) ಕಾರವಾರ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುವ ಶಾಲೆಗಳ ಶೈಕ್ಷಣಿಕ ವರ್ಷ ಮುಗಿಯುತ್ತಾ ಬಂದರೂ ಇದುವರೆಗೂ ಎರಡನೇ ಸಮವಸ್ತ್ರ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) ಬಂದಿದ್ದಲ್ಲಿ, ವಿಳಂಬಕ್ಕೆ ಕಾರಣವೇನು; ಯಾವಾಗ ವಿತರಿಸಲಾಗುವುದು (ಸಂಪೂರ್ಣ ವಿವರ ನೀಡುವುದು)? | 2018-19ನೇ ಸಾಲಿಗೆ ಕೇಂದ್ರ ಸರ್ಕಾರದ ಸಹಭಾಗಿತ್ವದಲ್ಲಿ ಸಮಗ್ರ ಶಿಕ್ಷಣ ಅಭಿಯಾನ ವತಿಯಿಂದ ರಾಜ್ಯದ ಎಲ್ಲಾ ಸರ್ಕಾರಿ ಶಾಲೆಗಳ 1 ರಿಂದ 8ನೇ ತರಗತಿಯ ವಿದ್ಯಾರ್ಥಿಗಳಿಗೆ 2ನೇ ಜೊತೆ ಸಮವಸ್ತ್ರವನ್ನು ವಿತರಿಸಲು ಕೇಂದ್ರ ಸರ್ಕಾರದ ಯೋಜನಾ ಅನುಮೋದನಾ ಮಂಡಳಿ (ಪಿ.ಎ.ಬಿ) ಯಿಂದ ರೂ.9498.88 ಲಕ್ಷ ಅನುಮೋದನೆಯಾಗಿದ್ದು, ಕೇಂದ್ರ ಸರ್ಕಾರದ ಪಾಲು ಈವರೆಗೆ ಬಿಡುಗಡೆಯಾಗಿಲ್ಲದಿರುವುದರಿಂದ ಎರಡನೇ ಜೊತೆ ಸಮವಸ್ತ್ರವನ್ನು ಸಕಾಲದಲ್ಲಿ ವಿತರಿಸಲು ಸಾಧ್ಯವಾಗಿರುವುದಿಲ್ಲ.<br>ಆದ್ದರಿಂದ, ರಾಜ್ಯ ಸರ್ಕಾರದ ಅನುದಾನದಲ್ಲಿಯೇ ಎರಡನೇ ಜೊತೆ ಸಮವಸ್ತ್ರ ವಿತರಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |

ಇಡಿ 29 ಯೋಯೋಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 567
ಸದಸ್ಯರ ಹೆಸರು : ಶ್ರೀ ರವಿ ಸಿ.ಟಿ. (ಚಿಕ್ಕಮಗಳೂರು)
ಉತ್ತರಿಸಬೇಕಾದ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದಲ್ಲಿ ಸರ್ಕಾರಿ ಶಾಲಾ ಮಕ್ಕಳಿಗೆ ವರ್ಷಕ್ಕೆ ಎಷ್ಟು ಜೊತೆ ಸಮವಸ್ತ್ರ ವಿತರಣೆ ಮಾಡಲಾಗುತ್ತಿದೆ; ವರ್ಷದ ಯಾವ ತಿಂಗಳಿನಲ್ಲಿ ವಿತರಣೆ ಮಾಡಲಾಗುತ್ತಿದೆ; | ರಾಜ್ಯದಲ್ಲಿ ಸರ್ಕಾರಿ ಶಾಲಾ ಮಕ್ಕಳಿಗೆ ಸಾಮಾನ್ಯವಾಗಿ ಎರಡು ಜೊತೆ ಸಮವಸ್ತ್ರ ವಿತರಣೆ ಮಾಡಲಾಗುತ್ತಿದೆ. ಮೊದಲನೇ ಜೊತೆ ಸಮವಸ್ತ್ರವನ್ನು ಶೈಕ್ಷಣಿಕ ವರ್ಷದ ಪ್ರಾರಂಭದಲ್ಲಿ ಅಂದರೆ ಜೂನ್–ಜುಲೈ ತಿಂಗಳಿನಲ್ಲಿ ವಿತರಣೆ ಮಾಡಲಾಗುತ್ತಿದೆ ಮತ್ತು ಕೇಂದ್ರ ಸರ್ಕಾರದ ಸಹಭಾಗಿತ್ವದಲ್ಲಿ 1 ರಿಂದ 8ನೇ ತರಗತಿ ಮಕ್ಕಳಿಗೆ ನೀಡಲಾಗುತ್ತಿರುವ 2ನೇ ಜೊತೆ ಸಮವಸ್ತ್ರವನ್ನು ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗುವ ಅನುದಾನವನ್ನು ಆಧರಿಸಿ, ಸಾಮಾನ್ಯವಾಗಿ ಶೈಕ್ಷಣಿಕ ವರ್ಷದ ಮಧ್ಯಂತರ ಅವಧಿಯಲ್ಲಿ ವಿತರಿಸಲಾಗುವುದು. |
| ಆ) ಚಿಕ್ಕಮಗಳೂರು ಜಿಲ್ಲೆಯಲ್ಲಿ 2018–19ನೇ ಸಾಲಿನಲ್ಲಿ ಇದುವರೆವಿಗೂ ಒಂದೇ ಜೊತೆ ಸಮವಸ್ತ್ರ ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ಎರಡನೆ ಜೊತೆ ಸಮವಸ್ತ್ರ ನೀಡದೆ ಇರಲು ಕಾರಣಗಳೇನು; (ವಿವರ ಒದಗಿಸುವುದು) | ಸೈಕಲ್ ವಿತರಣೆ ಬಹುತೇಕ ಮುಕ್ತಾಯಗೊಂಡಿದೆ.<br><br>2018–19ನೇ ಸಾಲಿಗೆ ಕೇಂದ್ರ ಸರ್ಕಾರದ ಸಹಭಾಗಿತ್ವದಲ್ಲಿ ಸಮಗ್ರ ಶಿಕ್ಷಣ ಅಭಿಯಾನ ವತಿಯಿಂದ ರಾಜ್ಯದ ಎಲ್ಲಾ ಸರ್ಕಾರಿ ಶಾಲೆಗಳ 1 ರಿಂದ 8ನೇ ತರಗತಿಯ ವಿದ್ಯಾರ್ಥಿಗಳಿಗೆ 2ನೇ ಜೊತೆ ಸಮವಸ್ತ್ರವನ್ನು ವಿತರಿಸಲು ಕೇಂದ್ರ ಸರ್ಕಾರದ ಯೋಜನಾ ಅನುಮೋದನಾ ಮಂಡಳಿ (ಪಿ.ಎ.ಬಿ) ಯಿಂದ ರೂ.9498.88 ಲಕ್ಷ ಅನುಮೋದನೆಯಾಗಿದ್ದು, ಕೇಂದ್ರ ಸರ್ಕಾರ ಪಾಲು ಈವರೆಗೆ ಬಿಡುಗಡೆಯಾಗಿಲ್ಲದಿರುವುದರಿಂದ ಎರಡನೇ ಜೊತೆ ಸಮವಸ್ತ್ರವನ್ನು ಸಕಾಲದಲ್ಲಿ ವಿತರಿಸಲು ಸಾಧ್ಯವಾಗಿರುವುದಿಲ್ಲ.<br>ಆದ್ದರಿಂದ, ರಾಜ್ಯ ಸರ್ಕಾರದ ಅನುದಾನದಲ್ಲಿಯೇ ಎರಡನೇ ಜೊತೆ ಸಮವಸ್ತ್ರ ವಿತರಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |
| ಇ) ಶೈಕ್ಷಣಿಕ ವರ್ಷ ಮುಗಿಯುತ್ತಾ ಬಂದರೂ ಇದುವರೆಗೂ ಶಾಲಾ ಮಕ್ಕಳಿಗೆ ಸೈಕಲ್ ವಿತರಣೆ ಮಾಡದೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ಇದುವರೆಗೂ ಸೈಕಲ್ ವಿತರಣೆ ಮಾಡದಿರುವ ಕಾರಣಗಳೇನು; ಯಾವಾಗ ವಿತರಣೆ ಮಾಡಲಾಗುವುದು (ವಿವರ ಒದಗಿಸುವುದು) | ಬಂದಿದೆ.<br><br>ವಿತರಿಸಲಾಗಿರುವ ಸೈಕಲ್‌ಗಳು ಗುಣಮಟ್ಟದಿಂದ ಕೂಡಿರುವುದಿಲ್ಲವೆಂದು ಬಹಳಷ್ಟು ದೂರುಗಳು ಬಂದಿದ್ದರಿಂದ ಬೈಸಿಕಲ್‌ಗಳ ವಿತರಣೆಯನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿತ್ತು. ಪ್ರಸ್ತುತ, ಗುಣಮಟ್ಟ ತಪಾಸಣಾ ಸಂಸ್ಥೆಗಳ ವರದಿಯನ್ನಾಧರಿಸಿ ಸೈಕಲ್ ವಿತರಣೆಯನ್ನು ಪ್ರಾರಂಭಿಸಲಾಗಿದ್ದು, ಬಹುತೇಕ ಜಿಲ್ಲೆಗಳಲ್ಲಿ ವಿತರಣೆ ಪೂರ್ಣಗೊಂಡಿರುತ್ತದೆ. |

ಇಡಿ 33 ಯೋಯೋಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 769 |
| ಸದಸ್ಯರ ಹೆಸರು | : | ಶ್ರೀ ಶ್ರೀಮಂತ್ ಬಾಳಾಸಾಹೇಬ್ ಪಾಟೀಲ್ (ಕಾಗವಾಡ) |
| ಉತ್ತರಿಸಬೇಕಾದ ದಿನಾಂಕ | : | 12-02-2019 |
| ಉತ್ತರಿಸುವ ಸಚಿವರು | : | ಮಾನ್ಯ ಮುಖ್ಯಮಂತ್ರಿಗಳು |

<table>
<tr><th colspan="2">ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಬೆಳಗಾವಿ ಜಿಲ್ಲೆ ಕಾಗವಾಡ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆ ಕಟ್ಟಡಗಳ ದುರಸ್ತಿ ಕಾಮಗಾರಿ ಮತ್ತು ಹೆಚ್ಚುವರಿ ಕೊಠಡಿಗಳಿಗೆ ಅನುದಾನ ಬಿಡುಗಡೆ ಮಾಡುವಂತೆ ಪ್ರಸ್ತಾವನೆ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;</td><td>ಬಂದಿದೆ.</td></tr>
<tr><td>(ಆ)</td><td>ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ (ಮಾಹಿತಿ ನೀಡುವುದು);</td><td>2018-19ನೇ ಸಾಲಿನಲ್ಲಿ ಕಾಗವಾಡ ಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆ ಕಟ್ಟಡಗಳ ದುರಸ್ತಿ ಕಾಮಗಾರಿ ಮತ್ತು ಕೊಠಡಿ ನಿರ್ಮಾಣಕ್ಕಾಗಿ ಈ ಕೆಳಕಂಡಂತೆ ಅನುದಾನ ಒದಗಿಸಲಾಗಿದೆ.<br>(ರೂ. ಲಕ್ಷಗಳಲ್ಲಿ)
<table>
<tr><th rowspan="2">ಮತಕ್ಷೇತ್ರ</th><th colspan="3">ದುರಸ್ತಿಗಾಗಿ</th><th colspan="3">ಕೊಠಡಿ ನಿರ್ಮಾಣಕ್ಕಾಗಿ</th></tr>
<tr><th>ಶಾಲೆಗಳ ಸಂಖ್ಯೆ</th><th>ಮಂಜೂರು</th><th>ಬಿಡುಗಡೆ</th><th>ಶಾಲೆಗಳ ಸಂಖ್ಯೆ</th><th>ಮಂಜೂರು</th><th>ಬಿಡುಗಡೆ</th></tr>
<tr><td>ಕಾಗವಾಡ</td><td>02</td><td>17.68</td><td>8.84</td><td>02</td><td>21.20</td><td>10.60</td></tr>
</table>
ಕಾಮಗಾರಿಗಳನ್ನು ಜಿಲ್ಲಾ ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳ ಅನುಮೋದನೆಯಂತೆ ಸಂಬಂಧಪಟ್ಟ ಏಜೆನ್ಸಿಗೆ ಹಸ್ತಾಂತರಿಸಲಾಗಿರುತ್ತದೆ.</td></tr>
<tr><td>(ಇ)</td><td>ಕಾಗವಾಡ ಮತಕ್ಷೇತ್ರ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕಟ್ಟಡಗಳು ಶಿಥಿಲಾವಸ್ಥೆಯಲ್ಲಿದ್ದು, ದುರಸ್ತಿ ಕಾರ್ಯವನ್ನು ಮಾಡಲು ಕೂಡಲೇ ಅನುದಾನ ಬಿಡುಗಡೆ ಮಾಡಲು ಕ್ರಮ ಕೈಗೊಳ್ಳಲಾಗುವುದೇ;</td><td rowspan="2">ಪ್ರತಿವರ್ಷ ಆಯವ್ಯಯದಲ್ಲಿ ಸರ್ಕಾರಿ ಶಾಲೆಗಳ ಮೂಲಭೂತ ಸೌಕರ್ಯಕ್ಕಾಗಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಹಂಚಿಕೆ ಮಾಡಲಾಗುವ ಅನುದಾನದಲ್ಲಿ, ಅಗತ್ಯತೆಗನುಗುಣವಾಗಿ ಅನುದಾನದ ಲಭ್ಯತೆಯನ್ನಾಧರಿಸಿ, ಹಂತ ಹಂತವಾಗಿ ಶಾಲಾ ಕಟ್ಟಡಗಳ ದುರಸ್ಥಿ ಹಾಗೂ ಹೊಸ ಕಟ್ಟಡಗಳ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದೆ.</td></tr>
<tr><td>(ಈ)</td><td>ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಅನುದಾನ ಬಿಡುಗಡೆ ಮಾಡಲಾಗುವುದು (ಮಾಹಿತಿ ನೀಡುವುದು)?</td></tr>
</table>

ಇಡಿ 49 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 320
ಸದಸ್ಯರ ಹೆಸರು : ಶ್ರೀ ಕುಮಾರ ಬಂಗಾರಪ್ಪ. ಎಸ್ (ಸೊರಬ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಕಾಂಪೌಂಡುಗಳಿಲ್ಲದ ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳ ಸಂಖ್ಯೆ ಎಷ್ಟು; | ಸೊರಬ ವಿಧಾನಸಭಾ ಕ್ಷೇತ್ರದಲ್ಲಿ ಕಾಂಪೌಂಡ್‌ಗಳಿಲ್ಲದ ಪ್ರಾಥಮಿಕ ಶಾಲೆಗಳು-88<br>ಪ್ರೌಢಶಾಲೆಗಳು-8. |
| (ಆ) ಈ ಶಾಲೆಗಳಿಗೆ ಕಾಂಪೌಂಡುಗಳನ್ನು ನಿರ್ಮಿಸಲು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | 2018-19ನೇ ಸಾಲಿನ ನರೇಗಾ ಯೋಜನೆಯಡಿಯಲ್ಲಿ ಗ್ರಾಮ ಪಂಚಾಯಿತಿವಾರು ಮೂಲಭೂತ ಸೌಲಭ್ಯಕ್ಕಾಗಿ ಕ್ರಿಯಾ ಯೋಜನೆಯನ್ನು ಸಿದ್ದಪಡಿಸಿ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಶಿವಮೊಗ್ಗ, ಇವರಿಗೆ ಅನುಮೋದನೆಗಾಗಿ ಕಳುಹಿಸಲಾಗಿದೆ. |
| (ಇ) ಎಷ್ಟು ಪ್ರಾಥಮಿಕ ಹಾಗೂ ಪ್ರೌಢ ಶಾಲೆಗಳಲ್ಲಿ ಶೌಚಾಲಯದ ವ್ಯವಸ್ಥೆಗಳಿರುವುದಿಲ್ಲ? | ಎಲ್ಲಾ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಶೌಚಾಲಯ ವ್ಯವಸ್ಥೆ ಇರುತ್ತದೆ. |

ಇಡಿ 39 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 318
ಸದಸ್ಯರ ಹೆಸರು : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಪ್ರಶ್ನೆ | ಉತ್ತರ |
|---|---|
| (ಅ) ರಾಜ್ಯದ ಶಾಲೆಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| (ಆ) ಬಂದಿದ್ದಲ್ಲಿ, ಸರ್ಕಾರ ಕೈಗೊಂಡ ಕ್ರಮಗಳೇನು; | 2018-19ನೇ ಸಾಲಿನಲ್ಲಿ ರಾಜ್ಯದ ಸರ್ಕಾರಿ ಪ್ರಾಥಮಿಕ/ಪ್ರೌಢಶಾಲೆಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಈ ಕೆಳಕಂಡಂತೆ ಅನುದಾನ ಮಂಜೂರು ಮಾಡಲಾಗಿದೆ. |

| ಕ್ರ ಸಂ | ವಿವರ | ಮಂಜೂರಾದ ಅನುದಾನ (ರೂ.ಲಕ್ಷಗಳಲ್ಲಿ) |
|---|---|---|
| 1 | ಪ್ರಾಥಮಿಕ ಶಾಲಾ ಕೊಠಡಿ ದುರಸ್ಥಿ | 1603.00 |
| 2 | ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ಮಾಣ | 996.40 |
| 3 | ಪ್ರೌಢ ಶಾಲಾ ಕೊಠಡಿ ದುರಸ್ಥಿ | 1989.44 |
| 4 | ಪ್ರೌಢ ಶಾಲಾ ಕೊಠಡಿಗಳ ನಿರ್ಮಾಣ (ರಾಜ್ಯ ಬಂಡವಾಳ ವೆಚ್ಚ) | 6426.00 |
| 5 | **ವಿಶೇಷ ಪ್ಯಾಕೇಜ್ ಅಡಿಯಲ್ಲಿ :** | |
| | ಪ್ರಾಥಮಿಕ ಶಾಲೆಗಳ ಕೊಠಡಿ ನಿರ್ಮಾಣ | 16165.00 |
| | ಪ್ರೌಢಶಾಲೆಗಳ ಕೊಠಡಿ ನಿರ್ಮಾಣ | 13828.50 |
| 6 | ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕುಡಿಯುವ ನೀರು ಮತ್ತು ಶೌಚಾಲಯ ನಿರ್ವಹಣೆ | 1737.51 |

| ಪ್ರಶ್ನೆ | ಉತ್ತರ |
|---|---|
| (ಇ) ಶಾಲೆಗಳ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕುಂಠಿತವಾಗಲು ಕಾರಣಗಳೇನು? | 1. ಸರ್ವ ಶಿಕ್ಷಣ ಅಭಿಯಾನ ಹಾಗೂ ಮಾಧ್ಯಮಿಕ ಶಿಕ್ಷಣ ಅಭಿಯಾನ ಯೋಜನೆಗಳಡಿ ರಾಜ್ಯಾದ್ಯಂತ ಹೆಚ್ಚಿನ ಸಂಖ್ಯೆಯ ಶಾಲೆಗಳನ್ನು ಪ್ರಾರಂಭಿಸಿರುವುದು.<br>2. ಮೇಲಿನ ಎರಡೂ ಯೋಜನೆಗಳಡಿ ಬರುತ್ತಿದ್ದ ಅನುದಾನ ಕಡಿತಗೊಂಡಿರುವುದು.<br>3. ಶಿಕ್ಷಣ ಇಲಾಖೆಗೆ ಹಂಚಿಕೆಯಾಗುತ್ತಿರುವ ಅನುದಾನದಲ್ಲಿ ಬಹುತೇಕ ಮೊತ್ತ ಸಿಬ್ಬಂದಿ ವೇತನಕ್ಕಾಗಿ ಬಳಕೆಯಾಗುತ್ತಿರುವುದು.<br>ಆದರೂ, ಈಗಾಗಲೇ ರಾಜ್ಯದ ಎಲ್ಲಾ ಶಾಲೆಗಳಿಗೂ ಕನಿಷ್ಠ ಮೂಲಭೂತ ಸೌಕರ್ಯಗಳನ್ನು ಒದಗಿಸಲಾಗಿದೆ. ಇಲಾಖೆಗೆ ಹಂಚಿಕೆಯಾಗುವ ಅನುದಾನದಲ್ಲಿ ಅಗತ್ಯತೆಗನುಗುಣವಾಗಿ ಹಂತ ಹಂತಗಳಲ್ಲಿ ಮೂಲಭೂತ ಸೌಕರ್ಯಗಳನ್ನು ವೃದ್ಧಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |

ಇಡಿ 38 ಯೋಸಕ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 652
ಸದಸ್ಯರ ಹೆಸರು : ಶ್ರೀ ಜ್ಯೋತಿ ಗಣೇಶ್.ಜಿ.ಬಿ (ತುಮಕೂರು ನಗರ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| | ಪ್ರಶ್ನೆ | ಉತ್ತರ |
|---|---|---|
| (ಅ) | ತುಮಕೂರು ನಗರದಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯಿಂದ ಎಷ್ಟು ಹಾಸ್ಟೆಲ್‌ಗಳನ್ನು/ವಸತಿ ಶಾಲೆಗಳನ್ನು ನಡೆಸಲಾಗುತ್ತಿದೆ: | ತುಮಕೂರು ನಗರದಲ್ಲಿ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಇಲಾಖೆಯಿಂದ ಯಾವುದೇ ಹಾಸ್ಟೆಲ್/ವಸತಿ ಶಾಲೆಗಳನ್ನು ನಡೆಸಲಾಗುತ್ತಿರುವುದಿಲ್ಲ. |
| (ಆ) | ಅವುಗಳು ಸ್ವಂತ ಕಟ್ಟಡದಲ್ಲಿವೆಯೇ ಅಥವಾ ಬಾಡಿಗೆ ಕಟ್ಟಡದಲ್ಲಿವೆಯೇ: ಬಾಡಿಗೆ ಕಟ್ಟಡ ಆಗಿದ್ದಲ್ಲಿ, ಮಾಸಿಕ ಎಷ್ಟು ಬಾಡಿಗೆ ಪಾವತಿಸಲಾಗುತ್ತಿದೆ: | ಉದ್ಭವಿಸುವುದಿಲ್ಲ. |
| (ಇ) | ಸ್ವಂತ ಕಟ್ಟಡ ನಿರ್ಮಾಣಕ್ಕೆ ಕೈಗೊಂಡ ಕ್ರಮಗಳೇನು? | ಉದ್ಭವಿಸುವುದಿಲ್ಲ. |

ಇಡಿ 04 ಎಂ.ಸಿ.ಡಿ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 743 |
| ಸದಸ್ಯರ ಹೆಸರು : | ಶ್ರೀ ಮುರುಗೇಶ ಆರ್ ನಿರಾಣಿ(ಬೀಳಗಿ) |
| ಉತ್ತರಿಸಬೇಕಾದ ದಿನಾಂಕ: | 12.02.2019. |
| ಉತ್ತರಿಸುವ ಸಚಿವರು : | ಗಣಿ ಮತ್ತು ಭೂವಿಜ್ಞಾನ ಸಚಿವರು |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬಾಗಲಕೋಟೆ ಜಿಲ್ಲೆಯ ಬೀಳಗಿ ವಿಧಾನಸಭಾ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಮರಳಿನ ಅಭಾವ ಉಂಟಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಗಮನಕ್ಕೆ ಬಂದಿರುತ್ತದೆ.<br>ಬಾಗಲಕೋಟೆ ಜಿಲ್ಲೆ, ಬದಾಮಿ ತಾಲ್ಲೂಕು ವ್ಯಾಪ್ತಿಯಲ್ಲಿ ಕರ್ನಾಟಕ ಉಪಖನಿಜ ರಿಯಾಯಿತಿ ನಿಯಮಾವಳಿ-1994 ರ ನಿಯಮ 31-ZAರಂತೆ ಪಟ್ಟಾ ಜಮೀನುಗಳಲ್ಲಿ **16** ಮರಳು ಗಣಿಗಾರಿಕೆಗೆ ಲೈಸನ್ಸ್ ನೀಡಲಾಗಿರುತ್ತದೆ. |
| ಆ) | ಮರಳಿನ ಅಭಾವದಿಂದಾಗಿ ಸರ್ಕಾರಿ, ಅರೆ ಸರ್ಕಾರಿ ಅಭಿವೃದ್ಧಿ ಕಾರ್ಯಗಳು ಸ್ಥಗಿತಗೊಂಡಿರುವುದನ್ನು ಸರ್ಕಾರ ಗಮನಿಸಿದೆಯೇ; | ಸದರಿ ಮರಳು ಗಣಿಗಾರಿಕೆ ಪ್ರದೇಶಗಳಿಂದ 2018-19ನೇ ಸಾಲಿನಲ್ಲಿ **5,07,889 ಮೆ.ಟನ್** ಮರಳನ್ನು ಸಾರ್ವಜನಿಕ ಮತ್ತು ಜಿಲ್ಲೆಯ ಸರ್ಕಾರಿ ಕಾಮಗಾರಿಗಳಿಗೆ ಪೂರೈಕೆಯಾಗುತ್ತಿದೆ.<br>ಬಾಗಲಕೋಟೆ ಜಿಲ್ಲೆ ವ್ಯಾಪ್ತಿಯಲ್ಲಿ ಒಂದು ಎಂ-ಸ್ಯಾಂಡ್ ಘಟಕ ಕಾರ್ಯನಿರ್ವಹಿಸುತ್ತಿದ್ದು, ಸದರಿ ಘಟಕದಿಂದ 2018-19ನೇ ಸಾಲಿನಲ್ಲಿ **80,000 ಮೆ.ಟನ್** ಎಂ-ಸ್ಯಾಂಡ್ ಉತ್ಪಾದನೆ ಮಾಡಿ, ಸಾರ್ವಜನಿಕರಿಗೆ ಮತ್ತು ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗಿರುತ್ತದೆ. |
| ಇ) | ಹಾಗಿದ್ದಲ್ಲಿ, ಮರಳಿನ ಕೊರತೆಯನ್ನು ನೀಗಿಸುವಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಅಲ್ಲದೇ, ಬೆಳಗಾವಿ ಜಿಲ್ಲೆಯ ಎಂ-ಸ್ಯಾಂಡ್ ಘಟಕಗಳಿಂದ ಬಾಗಲಕೋಟೆ ಜಿಲ್ಲೆಗೆ ಉತ್ಪಾದಿತ ಮರಳು ಸರಬರಾಜಾಗುತ್ತಿದೆ.<br>ಮುಂದುವರೆದು, ಬಾಗಲಕೋಟೆ ಜಿಲ್ಲೆಯ ಬೀಳಗಿ ತಾಲ್ಲೂಕಿನ ಕೃಷ್ಣಾ ನದಿ ಪಾತ್ರದಲ್ಲಿ 04 ಮರಳು ಬ್ಲಾಕ್‌ಗಳನ್ನು ಸಾರ್ವಜನಿಕ ಟೆಂಡರ್-ಕಂ-ಇ-ಹರಾಜು ಮೂಲಕ ಮರಳು ಗುತ್ತಿಗೆಗಳನ್ನು ಯಶಸ್ವಿ ಬಿಡ್ಡುದಾರರಿಗೆ ಮಂಜೂರು ಮಾಡಲಾಗಿರುತ್ತದೆ. ಸದರಿ ಮರಳು ಬ್ಲಾಕ್‌ಗಳು ನೀರಿನಿಂದ ಆವೃತವಾಗಿದ್ದ ಕಾರಣ ಮರಳು ಗಣಿಗಾರಿಕೆ ಪ್ರಾರಂಭಿಸಿರುವುದಿಲ್ಲ. ನದಿಯಲ್ಲಿ ನೀರು ಇಳಿಕೆಯಾದ ನಂತರ ಮರಳು ಗಣಿಗಾರಿಕೆ ಪ್ರಾರಂಭಿಸಿ, ಸದರಿ ಮರಳು ಬ್ಲಾಕ್‌ಗಳಲ್ಲಿ ಮರಳನ್ನು ಗಣಿಗಾರಿಕೆ ನಡೆಸಿ ಸಾರ್ವಜನಿಕ ಮತ್ತು ಸರ್ಕಾರಿ ಕಾಮಗಾರಿಗಳಿಗೆ ಪೂರೈಸಲಾಗುವುದು |
| ಈ) | ಅಕ್ರಮ ಮರಳು ಸಾಗಾಣಿಕೆಯಲ್ಲಿ ತಾಲ್ಲೂಕು ಆಡಳಿತ ಶಾಮೀಲಾಗಿದ್ದು, ಲಂಚ ನೀಡಿದವರನ್ನು ಕೈಬಿಟ್ಟು, ಲಂಚ ನೀಡದವರ ವಿರುದ್ಧ ಮಾತ್ರ ಮೊಕದ್ದಮೆಗಳನ್ನು ಹಾಕುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಾಗಲಕೋಟೆ ಜಿಲ್ಲಾ ವ್ಯಾಪ್ತಿಯಲ್ಲಿ ಮರಳು ಸೇರಿದಂತೆ ಇನ್ನಿತರ ಉಪಖನಿಜಗಳ ಅನಧಿಕೃತ ಗಣಿಗಾರಿಕೆ ಹಾಗೂ ಸಾಗಾಣಿಕೆ ಸಂಬಂಧಪಟ್ಟಂತೆ 2018-19ನೇ ಸಾಲಿನಲ್ಲಿ ಒಟ್ಟು 13 ಪ್ರಕರಣಗಳನ್ನು ಸಂಬಂಧಪಟ್ಟ ನ್ಯಾಯಾಲಯಗಳಲ್ಲಿ ದಾಖಲಿಸಲಾಗಿರುತ್ತದೆ. |

| | | |
|---|---|---|
| ಉ) | ಹಾಗಿದ್ದಲ್ಲಿ, ಅಂತಹ ಅಧಿಕಾರಿಗಳ ವಿರುದ್ಧ ಯಾವ ಕಠಿಣ ಶಿಸ್ತು ಕ್ರಮಗಳನ್ನು ಸರ್ಕಾರ ಕೈಗೊಂಡಿದೆ; ಇಲ್ಲವಾದಲ್ಲಿ, ಮುಂದೆಯಾದರೂ ಅಂತಹ ಭ್ರಷ್ಟ ಅಧಿಕಾರಿಗಳ ವಿರುದ್ಧ ಕಠಿಣವಾದ ಶಿಸ್ತು ಕ್ರಮ ಕೈಗೊಳ್ಳುವುದೇ; ಈ ಬಗ್ಗೆ ಕಳೆದ ಮೂರು ವರ್ಷಗಳಿಂದ ದಾಖಲಾದ ಪ್ರಕರಣಗಳ ವಿವರ ನೀಡುವುದು? | ಬಾಗಲಕೋಟೆ ಜಿಲ್ಲಾ ವ್ಯಾಪ್ತಿಯಲ್ಲಿ ಅನಧಿಕೃತ ಮರಳು ಗಣಿಗಾರಿಕೆ ಹಾಗೂ ಸಾಗಾಣಿಕೆ ಸಂಬಂಧಪಟ್ಟಂತೆ ಕಳೆದ ಮೂರು ವರ್ಷಗಳಲ್ಲಿ 348 ಪ್ರಕರಣಗಳನ್ನು ಸಂಬಂಧಪಟ್ಟ ಪೋಲಿಸ್ ಠಾಣೆಗಳಲ್ಲಿ ಹಾಗೂ ನ್ಯಾಯಾಲಯಗಳಲ್ಲಿ ದಾಖಲಿಸಲಾಗಿರುತ್ತದೆ. |

ಸಂಖ್ಯೆ: ಸಿಐ 57 ಎಂಎಂಎನ್ 2019

(ರಾಜಶೇಖರ ಬಿ. ಪಾಟೀಲ)
ಗಣಿ ಮತ್ತು ಭೂವಿಜ್ಞಾನ ಸಚಿವರು.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 314

ಸದಸ್ಯರ ಹೆಸರು : ಶ್ರೀ ಅರವಿಂದ ಲಿಂಬಾವಳಿ(ಮಹದೇವಪುರ)

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ನಗರದ ಬಹುತೇಕ ಎಲ್ಲಾ ಭಾಗಗಳಲ್ಲಿ ಇತ್ತೀಚೆಗೆ ವಿದ್ಯುತ್ ಪೂರೈಕೆಯಲ್ಲಿ ವ್ಯತ್ಯಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತುತ, ಬೆಂಗಳೂರು ನಗರ ವ್ಯಾಪ್ತಿಗೆ ದಿನವಹಿ ಸರಾಸರಿ 43 ರಿಂದ 48 ದಶಲಕ್ಷ ಯೂನಿಟ್‌ಗಳ ವಿದ್ಯುತ್ತಿನ ಅವಶ್ಯಕತೆಯಿದ್ದು, ಕೆಲವೊಮ್ಮೆ ಆಕಸ್ಮಿಕವಾಗಿ ಉಂಟಾಗಬಹುದಾದ ತಾಂತ್ರಿಕ ಅಡಚಣೆಗಳನ್ನು ಹೊರತುಪಡಿಸಿ ದಿನದ 24 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಇದಕ್ಕೆ ಕಾರಣಗಳೇನು; | |
| ಇ) | ಸಮರ್ಪಕವಾಗಿ ವಿದ್ಯುತ್ ಪೂರೈಕೆ ಮಾಡಲು ಕೈಗೊಂಡಿರುವ ಕ್ರಮಗಳೇನು (ವಿವರ ನೀಡುವುದು)? | ಬೆಂಗಳೂರು ನಗರ ವ್ಯಾಪ್ತಿಯಲ್ಲಿ, ಸಮರ್ಪಕವಾಗಿ ವಿದ್ಯುತ್ ಪೂರೈಕೆ ಮಾಡಲು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯು ಈ ಕೆಳಕಂಡ ಕ್ರಮಗಳನ್ನು ತೆಗೆದುಕೊಂಡಿದೆ.<br>• ವಿದ್ಯುತ್ ಬೇಡಿಕೆಗೆ ತಕ್ಕಂತೆ ವಿದ್ಯುಚ್ಛಕ್ತಿ ಪೂರೈಸಲು, ರಾಜ್ಯದ ಆಂತರಿಕ ಮೂಲಗಳು, ಕೇಂದ್ರೀಯ ಘಟಕಗಳು ಮತ್ತು ನವೀಕೃತ ಇಂಧನ ಮೂಲಗಳಿಂದ ವಿದ್ಯುತ್‌ನ್ನು ಖರೀದಿಸಲಾಗುತ್ತಿದೆ.<br>• ಆರ್ಥಿಕ ವರ್ಷ 2018-19ರ ಸಾಲಿನ ಬಜೆಟ್ ಕಾರ್ಯಕ್ರಮದ ಅಡಿಯಲ್ಲಿ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಬೆಂಗಳೂರು ಮಹಾನಗರ ಕ್ಷೇತ್ರ ವಲಯ ಪ್ರದೇಶದಲ್ಲಿ ಎಚ್.ಟಿ/ಎಲ್.ಟಿ ಮೇಲ್ಮಾರ್ಗಗಳನ್ನು ಭೂಗತ ಕೇಬಲ್/ಏರಿಯಲ್ ಬಂಚ್ ಮಾರ್ಗಗಳನ್ನಾಗಿ ಪರಿವರ್ತಿಸಲು ಉದ್ದೇಶಿಸಿದ್ದು, ಕಾಮಗಾರಿಯನ್ನು ಹಂತ ಹಂತವಾಗಿ ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗುವುದು.<br>ಅಲ್ಲದೆ, ವಿದ್ಯುತ್ ಅಭಾವದ ಸಮಯದಲ್ಲಿ ಬೆ.ವಿ.ಕಂ.ನಿ ಲೋಡ್ ನಿರ್ವಹಣೆಯನ್ನು ಪರಿಣಾಮಕಾರಿಯಾಗಿ (Effective load management) ಜಾರಿಗೊಳಿಸಲಾಗುತ್ತಿದೆ. |

ಸಂಖ್ಯೆ: ಇಎನ್ 17 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 956

ಸದಸ್ಯರ ಹೆಸರು : ಶ್ರೀ ರಾಮಚಂದ್ರ ಎಸ್.ವಿ. (ಜಗಳೂರು)

ಉತ್ತರಿಸುವ ದಿನಾಂಕ : 12.02.2019

ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ದಾವಣಗೆರೆ ಜಿಲ್ಲೆ ಜಗಳೂರು ವಿಧಾನ ಸಭಾ ಕ್ಷೇತ್ರದ ಜಗಳೂರು ಪಟ್ಟಣದಲ್ಲಿ ನೂತನ ಡಿಪ್ಲೊಮ ಪಾಲಿಟೆಕ್ನಿಕ್ ಕಾಲೇಜನ್ನು ಪ್ರಾರಂಭಿಸಲು ಮನವಿ ಸಲ್ಲಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಕಾಲೇಜನ್ನು ಪ್ರಾರಂಭಿಸಲು ಸರ್ಕಾರ ಕೈಗೊಂಡ ಕ್ರಮಗಳೇನು? | ಪ್ರಸ್ತುತ ಜಗಳೂರಿನಲ್ಲಿ ಹೊಸ ಸರ್ಕಾರಿ ಪಾಲಿಟೆಕ್ನಿಕ್ ಪ್ರಾರಂಭಿಸುವ ಅವಶ್ಯಕತೆ ಇರುವುದಿಲ್ಲ. |

ಇಡಿ 20 ಹೆಚ್‌ಪಿಯು 2019

(ಜಿ.ಟಿ ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 766
ಸದಸ್ಯರ ಹೆಸರು : ಶ್ರೀ ರಾಜೇಶ್ ನಾಯಕ್. ಯು (ಬಂಟ್ವಾಳ)
ಉತ್ತರಿಸುವ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬಂಟ್ವಾಳ ತಾಲ್ಲೂಕು ಕನ್ಯಾನ ಗ್ರಾಮದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸರ್ಕಾರದಿಂದ ಅನುದಾನ ಬಿಡುಗಡೆಗೊಳಸಲಾಗಿದೆಯೇ: | ಹೌದು |
| ಆ | ಹಾಗಿದ್ದಲ್ಲಿ, ಅನುದಾನ ಮೊತ್ತ ಎಷ್ಟು: ಯಾವ ಹಂತದಲ್ಲಿ ಇದೆ? | ಪ್ರಸ್ತುತ ಸಾಲಿನಲ್ಲಿ ಕಾಲೇಜಿಗೆ ಕಛೇರಿ, ವಿದ್ಯುತ್ ಇತರೆ ವೆಚ್ಚಗಳಿಗಾಗಿ ರೂ.20,000.00 ಬಿಡುಗಡೆ ಮಾಡಿದೆ. |

ಇಡಿ 36 ಹೆಚ್‌ಪಿಯು 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

- -

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 817 |
| ಸದಸ್ಯರ ಹೆಸರು | : | ಶ್ರೀ .ಆನಂದ್ @ ವಿಶ್ವನಾಥ ಚಂದ್ರಶೇಖರ್ ಮಾಮನಿ (ಸವದತ್ತಿ ಯಲ್ಲಮ್ಮಾ) |
| ಉತ್ತರಿಸುವ ದಿನಾಂಕ | : | 12.02.2019 |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸವದತ್ತಿ ಯಲ್ಲಮ್ಮಾ ಮತಕ್ಷೇತ್ರದಲ್ಲಿರುವ ಸರ್ಕಾರಿ ಪದವಿ ಕಾಲೇಜುಗಳಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ | ಬಂದಿದ್ದಲ್ಲಿ, ಸದರಿ ಕಾಲೇಜುಗಳಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ಸರ್ಕಾರ ಕೈಕೊಂಡ ಕ್ರಮಗಳೇನು; | ಸವದತ್ತಿ ಯಲ್ಲಮ್ಮಾ ಮತಕ್ಷೇತ್ರದಲ್ಲಿ 02 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿರುತ್ತದೆ.<br>1) ಸವದತ್ತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು<br>2) ಯರಗಟ್ಟಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜು<br>• ಸವದತ್ತಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಹೆಚ್ಚುವರಿ ತರಗತಿ ಕೊಠಡಿ ನಿರ್ಮಿಸಲು 2012-13ನೇ ಸಾಲಿನಲ್ಲಿ ರೂ.75 ಲಕ್ಷ, 2014-15ನೇ ಸಾಲಿನಲ್ಲಿ ರೂ.34.00 ಲಕ್ಷ, 2016-17ನೇ ಸಾಲಿನಲ್ಲಿ ರೂ.100.00 ಲಕ್ಷ, 2018-19ನೇ ಸಾಲಿನಲ್ಲಿ ರೂ.50.00 ಲಕ್ಷ ಹಾಗೂ ಶೌಚಾಲಯ ಕಟ್ಟಡ ನಿರ್ಮಾಣಕ್ಕಾಗಿ 2012-13ನೇ ಸಾಲಿನಲ್ಲಿ ರೂ.12.00 ಲಕ್ಷ, 2018-19ನೇ ಸಾಲಿನಲ್ಲಿ ರೂ.15.00 ಲಕ್ಷ ಮತ್ತು ಮಹಿಳಾ ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ 2018-19ನೇ ಸಾಲಿನಲ್ಲಿ ರೂ.15.00 ಲಕ್ಷಗಳ ಅಂದಾಜು .ಮೊತ್ತದಲ್ಲಿ ನಿರ್ಮಿಸಲು ಅನುಮೋದನೆ ನೀಡಿರುತ್ತದೆ.<br>• ಯರಗಟ್ಟಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು 2012-13ನೇ ಸಾಲಿನಲ್ಲಿ ರೂ.202.98 ಲಕ್ಷ, 2015-16ನೇ ಸಾಲಿನಲ್ಲಿ ಹೆಚ್ಚುವರಿ ತರಗತಿ ಕೊಠಡಿ ನಿರ್ಮಾಣಕ್ಕಾಗಿ ರೂ.51.00 ಲಕ್ಷ, 2018-19ನೇ ಸಾಲಿನಲ್ಲಿ ಹೆಚ್ಚುವರಿ ತರಗತಿ ಕೊಠಡಿ ನಿರ್ಮಾಣಕ್ಕಾಗಿ ರೂ.50.00 ಲಕ್ಷ ಹಾಗೂ ಶೌಚಾಲಯ ಕಟ್ಟಡ ನಿರ್ಮಾಣಕ್ಕಾಗಿ ರೂ.15.00 ಲಕ್ಷ ಮತ್ತು ಮಹಿಳಾ ವಿಶ್ರಾಂತಿ ಗೃಹ ನಿರ್ಮಾಣಕ್ಕಾಗಿ ರೂ.15.00 ಲಕ್ಷಗಳ ಅಂದಾಜು ಮೊತ್ತದಲ್ಲಿ ನಿರ್ಮಿಸಲು ಅನುಮೋದನೆ ನೀಡಿರುತ್ತದೆ. |
| ಇ | ಯಾವ ಕಾಲಮಿತಿಯೊಳಗೆ ಸೌಕರ್ಯಗಳನ್ನು ಕಲ್ಪಿಸಲಾಗುವುದು? (ಮಾಹಿತಿ ಒದಗಿಸುವುದು) | 2016-17ನೇ ಸಾಲಿನವರೆಗೆ ಅನುಮೋದನೆಯಾಗಿರುವ ಕಾಮಗಾರಿಗಳನ್ನು ಇನ್ನು 3 ತಿಂಗಳಲ್ಲಿ ಪೂರ್ಣಗೊಳಿಸಲು ಸೂಚಿಸಲಾಗಿದೆ. 2018-19ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಅನುಮೋದನೆಯಾಗಿರುವ ಕಾಮಗಾರಿಗಳನ್ನು ಆಡಳಿತಾತ್ಮಕ ಅನುಮೋದನೆ ನೀಡಿದ 18 ತಿಂಗಳೊಳಗೆ ಪೂರ್ಣಗೊಳಿಸಲು ಸೂಚಿಸಲಾಗಿದೆ. |

ಇಡಿ 37 ಹೆಚ್‌ಪಿಯು 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 749
ಸದಸ್ಯರ ಹೆಸರು : ಶ್ರೀ ಸುಬ್ಬಾರೆಡ್ಡಿ ಎಸ್.ಎನ್ (ಬಾಗೇಪಲ್ಲಿ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯದಲ್ಲಿ ರೈತರ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಪಡೆಯಲು (ಆರ್.ಆರ್.ನಂಬರ್) ಸರ್ವಿಸ್ ಲೈನ್ ಚಾರ್ಜ್ ಪಾವತಿ ಮಾಡಬೇಕಾಗಿದೆಯೇ; | ಹೊಸ ಅಥವಾ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳೆಂಬ ಯಾವುದೇ ಭೇದವಿಲ್ಲದೇ ನೋಂದಣಿಗೊಳ್ಳುವ ಎಲ್ಲಾ ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಉದ್ದೇಶದಿಂದ, ವಿವಿಧ ಪರ್ಯಾಯ ಮಾರ್ಗಗಳನ್ನು ತಿಳಿಸಿ, ದಿನಾಂಕ 14-07-2014 ಮತ್ತು 23-07-2014ರಂದು ಸುತ್ತೋಲೆಗಳನ್ನು ಹೊರಡಿಸಲಾಗಿದ್ದು, ಸದರಿ ಸುತ್ತೋಲೆಗಳು ಹಾಗೂ ಕೆ.ಇ.ಆರ್.ಸಿ ನಿಯಮಾವಳಿಗಳನ್ವಯ, ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕೋರಿ ಅರ್ಜಿ ನೋಂದಾಯಿಸುವವರು, ಅರ್ಜಿ ಶುಲ್ಕ, ಠೇವಣಿ ಶುಲ್ಕ ಹಾಗೂ ಮೂಲಸೌಕರ್ಯ ರಚನಾ ಶುಲ್ಕವನ್ನು ಪಾವತಿಸಿದ ನಂತರ ಆರ್.ಆರ್.ಸಂಖ್ಯೆ ನೀಡಿ ಅಧಿಕೃತ ವಿದ್ಯುತ್ ಸಂಪರ್ಕ ಕಲ್ಪಿಸಲು ಕ್ರಮ ವಹಿಸಲಾಗುತ್ತಿದೆ. |
| (ಆ) | ಹಾಗಿದ್ದಲ್ಲಿ, ಒಂದು ಪಂಪ್‌ಸೆಟ್‌ಗೆ ವಿದ್ಯುತ್ ಸಂಪರ್ಕ ಪಡೆಯಲು ಪಾವತಿಸಬೇಕಾದ ಸರ್ವೀಸ್ ಲೈನ್‌ಚಾರ್ಜ್ ಎಷ್ಟು; | ರೈತರು ಪ್ರತಿ ಪಂಪ್‌ಸೆಟ್ ಒಂದಕ್ಕೆ ಅರ್ಜಿ ಶುಲ್ಕ, ಠೇವಣಿ ಶುಲ್ಕ ಸೇರಿದಂತೆ ರೂ. 10,000/-ಗಳ ಮೂಲಸೌಕರ್ಯ ರಚನಾ ಶುಲ್ಕವನ್ನು ಪಾವತಿಸಬೇಕಾಗಿದೆ. |
| ಇ) | ಪ್ರಸ್ತುತ ರೈತರು ಆರ್ಥಿಕ ಸಂಕಷ್ಟದಲ್ಲಿದ್ದು ವಿದ್ಯುತ್ ಸರ್ವೀಸ್ ಪಡೆಯಲು ಹಣ ಪಾವತಿ ಮಾಡಲು ಕಷ್ಟಕರವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಸೌಕರ್ಯ ರಚಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲು, ವಿದ್ಯುತ್ ಸರಬರಾಜು ಕಂಪನಿಗಳಿಗೆ ಪ್ರತಿ ನೀರಾವರಿ ಪಂಪ್‌ಸೆಟ್‌ಗೆ ಸರಾಸರಿ ರೂ.1 ಲಕ್ಷಕ್ಕೂ ಹೆಚ್ಚು ವೆಚ್ಚವಾಗುತ್ತಿದ್ದು, ಈ ಮೊತ್ತವನ್ನು ಭರಿಸಲು ರೈತರಿಗೆ ಕಷ್ಟವಾಗಬಹುದೆಂಬ ಪರಿಗಣನೆಯೊಂದಿಗೆ, ವಿದ್ಯುತ್ ಸಂಪರ್ಕಕ್ಕೆ ಅರ್ಜಿ ನೋಂದಾಯಿಸುವ ಎಲ್ಲಾ ರೈತರುಗಳಿಂದ ರೂ. 10,000/-ಗಳ ಮೂಲಸೌಕರ್ಯ ರಚನಾ ಶುಲ್ಕವನ್ನು ಮಾತ್ರ ಪಡೆಯಲಾಗುತ್ತಿದೆ. ಉಳಿದ ಮೊತ್ತವನ್ನು ವಿದ್ಯುತ್ ಸರಬರಾಜು ಕಂಪನಿಗಳೇ ಭರಿಸುತ್ತಿವೆ.<br><br>ಪ್ರಸ್ತುತ ರೂ.10,000/- ಮೂಲಸೌಕರ್ಯ ರಚನೆ ಶುಲ್ಕ ಪಾವತಿಯನ್ನು ರದ್ದುಪಡಿಸುವ ಯಾವುದೇ ಪ್ರಸ್ತಾವನೆಯು ಸರ್ಕಾರದ ಮುಂದಿರುವುದಿಲ್ಲ. |
| ಈ) | ಬಂದಿದ್ದಲ್ಲಿ, ರೈತರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಈ ಹಣವನ್ನು ಪಾವತಿ ಮಾಡುವುದನ್ನು ರದ್ದುಪಡಿಸಲು ಸಾಧ್ಯವಿಲ್ಲವೇ? | |

ಸಂಖ್ಯೆ: ಇಎನ್ 41 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 216

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ ಕಿತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಿಗಡಿ ಗ್ರಾಮದಲ್ಲಿ 110 ಕೆ.ವಿ. ವಿದ್ಯುತ್ ಉಪ ಕೇಂದ್ರ ಮಂಜೂರಾತಿಗಾಗಿ ಸಲ್ಲಿಸಲಾಗಿರುವ ಪ್ರಸ್ತಾವನೆಯು ಸರ್ಕಾರದ ಯಾವ ಹಂತದಲ್ಲಿದೆ; | ಬೆಳಗಾವಿ ಜಿಲ್ಲೆ ಕಿತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ತಿಗಡಿ ಗ್ರಾಮದಲ್ಲಿ 110 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪನೆಯ ಪ್ರಸ್ತಾವನೆಯು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮುಂದೆ ಇದ್ದು, ತಾಂತ್ರಿಕ ಸಾಧ್ಯತೆಗಳನ್ನು ಪರಿಶೀಲಿಸಲಾಗುತ್ತಿದೆ. |
| ಆ) | ಯಾವ ಕಾಲಮಿತಿಯಲ್ಲಿ ತಿಗಡಿ ಗ್ರಾಮದಲ್ಲಿ 110 ಕೆ.ವಿ. ವಿದ್ಯುತ್ ಉಪಕೇಂದ್ರ ಆರಂಭಿಸಲಾಗುವುದು? | |

ಸಂಖ್ಯೆ: ಇಎನ್ 14 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 658
ಸದಸ್ಯರ ಹೆಸರು : ಶ್ರೀ ಶಿವನಗೌಡ ನಾಯಕ್.ಕೆ (ದೇವದುರ್ಗ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ದೇವದುರ್ಗ 220 ಕೆ.ವಿ. ವಿದ್ಯುತ್ ಉಪ ಕೇಂದ್ರ ಮತ್ತು ಮುಸರ್‌ಕಲ್ 110 ಕೆ.ವಿ. ವಿದ್ಯುತ್ ಉಪಕೇಂದ್ರಗಳನ್ನು ಪ್ರಾರಂಭಿಸಲು 2011ರಲ್ಲಿಯೇ ಟಿ.ಎಸ್.ಸಿ. ಅನುಮೋದನೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ದೇವದುರ್ಗ ಪಟ್ಟಣದಲ್ಲಿ 220 ಕೆ.ವಿ. ವಿದ್ಯುತ್ ಉಪಕೇಂದ್ರ ಮತ್ತು ಮಸರೆಕಲ್ ಗ್ರಾಮದಲ್ಲಿ 110 ಕೆ.ವಿ. ವಿದ್ಯುತ್ ಉಪಕೇಂದ್ರ ಸ್ಥಾಪನೆಗೆ ಈ ಹಿಂದೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಿಂದ ಅನುಮೋದನೆ ನೀಡಲಾಗಿತ್ತು. ಆದರೆ ಸದರಿ ವಿದ್ಯುತ್ ಉಪಕೇಂದ್ರಗಳಿಗೆ ಅಗತ್ಯವಿರುವ ಜಮೀನು ಲಭ್ಯವಿಲ್ಲದ ಕಾರಣ ಪ್ರಸ್ತಾವನೆಗಳನ್ನು ಕೈಬಿಡಲಾಗಿದೆ.<br><br>ಪ್ರಸ್ತುತ ದೇವದುರ್ಗ ಮತ್ತು ದೇವದುರ್ಗದಿಂದ ಸುಮಾರು 10 ಕಿ.ಮೀ. ದೂರದಲ್ಲಿರುವ ಮಸರಕಲ್ ಹಾಗೂ ಸುತ್ತಮುತ್ತಲಿನ ಪ್ರದೇಶಗಳಿಗೆ 110 ಕೆ.ವಿ ದೇವದುರ್ಗ ವಿದ್ಯುತ್ ಉಪಕೇಂದ್ರದಿಂದ ಸಮರ್ಪಕವಾಗಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಯಾವ ಕಾರಣಕ್ಕಾಗಿ ಸದರಿ ಕೇಂದ್ರಗಳು ಕಾರ್ಯಾರಂಭ ಮಾಡದಿರಲು ಕಾರಣಗಳೇನು; | |
| ಇ) | ಇದರಿಂದ ರೈತರಿಗೆ ಮತ್ತು ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿಲ್ಲವೇ; ಹಾಗಿದ್ದಲ್ಲಿ ಕೈಗೊಂಡ ಕ್ರಮಗಳೇನು; | |
| ಈ) | ಅನುಮೋದನೆಗೊಂಡಿರುವ ಉಪಕೇಂದ್ರಗಳ ಕಾಮಗಾರಿಗಳನ್ನು ಪ್ರಾರಂಭಿಸಲು ಟೆಂಡರ್ ಕರೆಯಲು ಸರ್ಕಾರ ಕೂಡಲೇ ಕ್ರಮ ಕೈಗೊಳ್ಳುವುದೇ; ಯಾವಾಗ ಟೆಂಡರ್ ಕರೆಯಲಾಗುವುದು; ಟೆಂಡರ್ ಪ್ರಸ್ತಾವನೆ ಯಾವ ಹಂತದಲ್ಲಿದೆ; 2019-20ನೇ ಸಾಲಿನಲ್ಲಾದರೂ ಸದರಿ ಉಪಕೇಂದ್ರಗಳನ್ನು ಪ್ರಾರಂಭಿಸಲು ಸರ್ಕಾರ ಚಿಂತಿಸುವುದೇ? | |

ಸಂಖ್ಯೆ: ಎನ್ 37 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 819
ಸದಸ್ಯರ ಹೆಸರು : ಶ್ರೀ ಶ್ರೀರಾಮುಲು ಬಿ (ಮೊಳಕಾಲ್ಮೂರು)
ಉತ್ತರಿಸುವ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮಾನ್ಯ ಸಕ್ಕರೆ ಸಚಿವರು

<table>
<tr><th>ಕ್ರ.ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ರಾಜ್ಯದಲ್ಲಿ ಎಷ್ಟು ಸಕ್ಕರೆ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ; (ವಿವರ ನೀಡುವುದು)</td><td>ರಾಜ್ಯದಲ್ಲಿ ಒಟ್ಟು 67 ಸಕ್ಕರ ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ. ಇವುಗಳ ಪೈಕಿ ಸರ್ಕಾರಿ-1, ಸಹಕಾರಿ-13, ಸಹಕಾರಿ ಗುತ್ತಿಗೆ-6, ಖಾಸಗಿ-47 ಕಾರ್ಖಾನೆಗಳು ಕಾರ್ಯ ನಿರ್ವಹಿಸುತ್ತಿವೆ.</td></tr>
<tr><td>ಆ)</td><td>ರಾಜ್ಯದಲ್ಲಿರುವ ಸಕ್ಕರೆ ಕಾರ್ಖಾನೆ ಮಾಲೀಕರು ಕಳೆದ ಮೂರು ವರ್ಷಗಳಲ್ಲಿ ರೈತರ ಎಷ್ಟು ಹಣ ಬಾಕಿ ಉಳಿಸಿಕೊಂಡಿದ್ದಾರೆ; (ಕಾರ್ಖಾನೆಗಳವಾರು ಸಂಪೂರ್ಣ ವಿವರ ನೀಡುವುದು)</td><td>ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಕ್ಕರೆ ಕಾರ್ಖಾನೆಗಳು ರೈತರಿಗೆ ಪಾವತಿಸಲು ಬಾಕಿ ಉಳಿಸಿಕೊಂಡಿರುವ ಕಳೆದ 3 ವರ್ಷಗಳ ವಿವರ ದಿನಾಂಕ 31.01.2019ಕ್ಕೆ ಇದ್ದಂತೆ ಈ ಕೆಳಕಂಡಂತಿದೆ.<br>(ರೂ. ಕೋಟಿಗಳಲ್ಲಿ)
<table>
<tr><th>ಕ್ರ. ಸಂ.</th><th>ವರ್ಷ</th><th>ಪಾವತಿಸ ಬೇಕಾದ ಮೊತ್ತ</th><th>ಪಾವತಿಸಿರುವ ಮೊತ್ತ</th><th>ಬಾಕಿ</th><th>ಶೇಕಡಾ ವಾರು ಬಾಕಿ</th></tr>
<tr><td>1</td><td>2015-16</td><td>10143.14</td><td>10122.30</td><td>20.84</td><td>0.21%</td></tr>
<tr><td>2</td><td>2016-17</td><td>5343.07</td><td>6702.84</td><td>0</td><td>0</td></tr>
<tr><td>3</td><td>2017-18</td><td>9851.83</td><td>10591.05</td><td>5.24</td><td>0.05%</td></tr>
</table>
ಬಾಕಿ ಉಳಿಸಿಕೊಂಡಿರುವ ಕಾರ್ಖಾನೆಗಳ ವಿವರ ಈ ಕೆಳಕಂಡಂತಿದೆ;<br>(ರೂ. ಕೋಟಿಗಳಲ್ಲಿ)
<table>
<tr><td>1) 2015-16ನೇ ಸಾಲಿನಲ್ಲಿ:<br>(1) ಐ.ಎಸ್.ಆರ್. ಶುಗರ್ಸ್, ಬಳ್ಳಾರಿ - 9.47<br>(2) ಶಿವಸಾಗರ್ ಶುಗರ್ಸ್, ಬೆಳಗಾವಿ - 11.37</td><td>20.84</td></tr>
<tr><td>2) 2016-17</td><td>ಬಾಕಿ ಇರುವುದಿಲ್ಲ</td></tr>
<tr><td>4) 2017-18ನೇ ಸಾಲಿನಲ್ಲಿ ಮಲಪ್ರಭಾ ಸಸಕಾ, ಬೆಳಗಾವಿ</td><td>5.24</td></tr>
</table></td></tr>
<tr><td>ಇ)</td><td>ರೈತರು ಬೆಳೆದ ಕಬ್ಬಿಗೆ ಕೇಂದ್ರ ಸರ್ಕಾರದ ಬೆಂಬಲ ಬೆಲೆಯನ್ನು ನೀಡುತ್ತಿದೆಯೇ; ಇದ್ದಲ್ಲಿ ಅದರ ವಿವರ ನೀಡುವುದು;</td><td>ಕಬ್ಬಿಗೆ ಬೆಂಬಲ ಬೆಲೆ ಎಂದು ಘೋಷಿಸುವ ಪದ್ಧತಿ ಜಾರಿಯಲ್ಲಿರುವುದಿಲ್ಲ. ಆದರೆ, ನ್ಯಾಯ ಮತ್ತು ಲಾಭದಾಯಕ ಬೆಲೆ (ಎಫ್‌ಆರ್‌ಪಿ) ಎಂದು ಕೇಂದ್ರ ಸರ್ಕಾರವು ಪ್ರತಿ ವರ್ಷ ಘೋಷಣೆ ಮಾಡುತ್ತದೆ. ಕಬ್ಬಿಗೆ ಕೇಂದ್ರ ಸರ್ಕಾರವು ಘೋಷಿಸುವ ಎಫ್‌ಆರ್‌ಪಿ ದರವನ್ನು ಮೊದಲ ಕಂತಿನಲ್ಲಿ ಪಾವತಿಸುವಂತೆ ಎಲ್ಲಾ ಸಕ್ಕರೆ ಕಾರ್ಖಾನೆಗಳಿಗೆ ಸೂಚಿಸಲಾಗುತ್ತದೆ. ಸಕ್ಕರೆ ಹಂಗಾಮು ಮುಕ್ತಾಯವಾದ ನಂತರ ಕಾರ್ಖಾನೆಗಳಿಂದ ಬರುವ ಪ್ರಾಥಮಿಕ ಉಪ ಉತ್ಪನ್ನಗಳಾದ ಸಕ್ಕರೆ, ಕಾಕಂಬಿ, ಬಗ್ಯಾಸ್ ಮತ್ತು ಪ್ರೆಸ್‌ಮಡ್‌ಗಳ ಉತ್ಪಾದನೆ ಮತ್ತು ಮಾರಾಟದ ಮಾಹಿತಿಯನ್ನು ಸಂಗ್ರಹಿಸಿ ಆದಾಯ ಹಂಚಿಕೆ ಸೂತ್ರದ ಅನುಸಾರ ಎರಡನೇ ಕಂತಿನ ದರವನ್ನು ಘೋಷಿಸುವ ಪದ್ಧತಿ ಜಾರಿಯಲ್ಲಿರುತ್ತದೆ.</td></tr>
<tr><td>ಈ)</td><td>ರಾಜ್ಯದಲ್ಲಿ ಕಬ್ಬು ಬೆಳೆಗಾರರು ಕಬ್ಬಿನ ಬಾಕಿ ಮೊತ್ತಕ್ಕೆ ಹಾಗೂ ಕಬ್ಬಿನ ಕನಿಷ್ಠ ಬೆಲೆಗಾಗಿ ಪ್ರತಿ ವರ್ಷ ಹೋರಾಟ ಮಾಡುತ್ತಾ ಬಂದಿದ್ದು, ಇದಕ್ಕೆ ಶಾಶ್ವತ ಪರಿಹಾರ ಕಂಡುಕೊಳ್ಳಲು ಸೂಕ್ತ ಕಾನೂನು ಕ್ರಮ ತೆಗೆದುಕೊಳ್ಳಲು ಸರ್ಕಾರವು ಕ್ರಮ ಕೈಗೊಂಡಿದೆಯೇ? (ಮಾಹಿತಿ ನೀಡುವುದು)</td><td>ರೈತರು ಬೆಳೆದ ಕಬ್ಬಿಗೆ ವೈಜ್ಞಾನಿಕ ಬೆಲೆ ನಿಗದಿಪಡಿಸಲು ಸರ್ಕಾರವು ದಿನಾಂಕ 12.03.2013 ರಲ್ಲಿ ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ, 2013 ನ್ನು ಜಾರಿಗೆ ತಂದಿದ್ದು, ಸದರಿ ಅಧಿನಿಯಮಕ್ಕೆ ದಿನಾಂಕ 28.08.2014 ರಲ್ಲಿ ಕೆಲವು ತಿದ್ದುಪಡಿಗಳನ್ನು ತಂದಿರುತ್ತದೆ. ಸದರಿ ಅಧಿನಿಯಮದ ಕಂಡಿಕೆ 3(1) ಮತ್ತು 2 ರಡಿಯಲ್ಲಿ ಮಾನ್ಯ ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ 04.09.2013 ರಲ್ಲಿ ಕಬ್ಬು ನಿಯಂತ್ರಣ ಮಂಡಳಿಯನ್ನು ರಚಿಸಲಾಗಿದೆ. ಕಬ್ಬು ನಿಯಂತ್ರಣ ಮಂಡಳಿಯಲ್ಲಿ ಮಾನ್ಯ ಕೃಷಿ ಸಚಿವರು ಸಹ ಅಧ್ಯಕ್ಷರಾಗಿದ್ದು, 4 ಜನ ಅಧಿಕಾರಿಗಳು, 5 ಜನ ರೈತ ಪ್ರತಿನಿಧಿಗಳು, ಸಹಕಾರಿ ಮತ್ತು ಖಾಸಗಿ ಸಕ್ಕರೆ ಕಾರ್ಖಾನೆಗಳ ವತಿಯಿಂದ 5 ಜನ ಸದಸ್ಯರು ಇರುತ್ತಾರೆ. ಸದರಿ ಮಂಡಳಿಯು ಕಾಲಕಾಲಕ್ಕೆ ಸಭೆಗಳನ್ನು ನಡೆಸಿ, ಸದರಿ ಅಧಿನಿಯಮದ ಕಂಡಿಕೆ 4(ಎಫ್)ರ ಪ್ರಕಾರ ಸಕ್ಕರೆ ಹಾಗೂ ಕಬ್ಬಿನ ಪ್ರಾಥಮಿಕ ಉಪ ಉತ್ಪನ್ನಗಳಿಂದ ಬರುವ ಆದಾಯವನ್ನು ಗಣನೆಗೆ ತೆಗೆದುಕೊಂಡು ಆದಾಯ ಹಂಚಿಕೆ ಸೂತ್ರದ ಆಧಾರದ ಮೇಲೆ ಕಬ್ಬಿನ ದರವನ್ನು ನಿಗದಿಪಡಿಸುತ್ತದೆ. ಅದರಂತೆ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಅಧಿಸೂಚನೆ ಹೊರಡಿಸಿ ಬಾಕಿ ಮೊತ್ತವನ್ನು ರೈತರಿಗೆ ಪಾವತಿಸುವಂತೆ ಕಾರ್ಖಾನೆಗಳಿಗೆ ಸೂಚನೆಗಳನ್ನು ನೀಡಿರುತ್ತಾರೆ.</td></tr>
</table>

ಸಂಖ್ಯೆ: ಸಿಐ 15 ಎಸ್‌ಜಿಎಫ್ 2019

(ಆರ್.ಬಿ.ತಿಮ್ಮಾಪೂರ)
ಮಾನ್ಯ ಸಕ್ಕರೆ ಸಚಿವರು

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 156
ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)
ಉತ್ತರಿಸಬೇಕಾದ ದಿನಾಂಕ : 12-02-2019
ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಪ್ರದೇಶಗಳಲ್ಲಿ ಮನೆಗಳಿಗೆ ವಿದ್ಯುತ್ ಸಂಪರ್ಕ ಪಡೆಯಲು ಗ್ರಾಮ ಪಂಚಾಯತಿಯಿಂದ ನಿರಾಪೇಕ್ಷಣಾ ಪತ್ರ ಪಡೆದು ವಿದ್ಯುತ್ ಕಂಪನಿಗಳಿಗೆ ಒದಗಿಸುವುದು ಕಡ್ಡಾಯವೇ; | ಹೌದು |
| ಆ) | ಹಾಗಿದ್ದಲ್ಲಿ, ಸರ್ಕಾರಿ ಜಮೀನಿನಲ್ಲಿ ಮನೆ ಕಟ್ಟಿಕೊಂಡು ವಾಸ್ತವ್ಯವಿರುವ ಕುಟುಂಬಗಳು ವಿದ್ಯುತ್ ಸಂಪರ್ಕ ಪಡೆಯಲು ಯಾವ ಕ್ರಮ ಅನುಸರಿಸ ಬೇಕಾಗುತ್ತದೆ? (ವಿವರ ಒದಗಿಸುವುದು) | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ, ಕರ್ನಾಟಕ ವಿದ್ಯುಚ್ಛಕ್ತಿ ಸರಬರಾಜು ನಿಯಮಾವಳಿಗಳ ಪ್ರಕಾರ (Conditions of Supply of Electricity of Distribution Licensees in the State of Karnataka) ಷರತ್ತು (4.02) ರಂತೆ, ಗ್ರಾಮೀಣ/ನಗರ ಪ್ರದೇಶಗಳಲ್ಲಿರುವ ಸ್ವಂತ ಕೃಷಿ ಜಮೀನು ಹಾಗೂ ಇತರ ಯಾವುದೇ ಜಮೀನುಗಳಲ್ಲಿ ಕಟ್ಟಲಾದ ಮನೆಗಳಿಗೆ ಸ್ಥಳೀಯ ಸಂಸ್ಥೆಗಳಿಂದ ನಿರಾಕ್ಷೇಪಣಾ ಪತ್ರ/ವಾಸ್ತವ್ಯ ದೃಢೀಕರಣ ಪತ್ರ/ಪರವಾನಿಗೆ ಪಡೆದು ವಿದ್ಯುತ್ ಸಂಪರ್ಕ ನೀಡಲಾಗುತ್ತಿದೆ. |

ಸಂಖ್ಯೆ: ಇಎನ್ 10 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 607

ಸದಸ್ಯರ ಹೆಸರು : ಶ್ರೀ ಅಂಗಾರ.ಎಸ್ (ಸುಳ್ಯ)

ಉತ್ತರಿಸಬೇಕಾದ ದಿನಾಂಕ : 12-02-2019

ಉತ್ತರಿಸುವ ಸಚಿವರು : ಮುಖ್ಯಮಂತ್ರಿಗಳು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಪುತ್ತೂರು ತಾಲ್ಲೂಕಿನ ನೆಟ್ಲಮುಡ್ನೂರುವಿನಿಂದ ಸುಳ್ಯಕ್ಕೆ ಮಂಜೂರಾಗಿರುವ 110 ಕೆ.ವಿ. ಲೈನ್ ಕಾಮಗಾರಿ ಅರಣ್ಯ ಇಲಾಖೆಯವರ ಆಕ್ಷೇಪದಿಂದಾಗಿ ಕುಂಠಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪುತ್ತೂರು ನೆಟ್ಲ ಮುಡ್ನೂರುನಿಂದ ಸುಳ್ಯಕ್ಕೆ ಮಂಜೂರಾಗಿರುವ 110 ಕೆ.ವಿ ಪ್ರಸರಣ ಮಾರ್ಗದ ನಿರ್ಮಾಣದ ಕಾಮಗಾರಿಗೆ, 6.745 ಹೆಕ್ಟೇರ್ ಅರಣ್ಯ ಭೂಮಿಯ ಬಿಡುಗಡೆಗಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವತಿಯಿಂದ ಆನ್‌ಲೈನ್ ಮುಖಾಂತರ ಪ್ರಸ್ತಾವನೆಯನ್ನು ದಿನಾಂಕ 02-03-2017 ರಂದು ಸಲ್ಲಿಸಲಾಗಿತ್ತು.<br>ಹೆಚ್ಚುವರಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) ಮತ್ತು ನೋಡಲ್ ಅಧಿಕಾರಿ, ಬೆಂಗಳೂರು ಇವರು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ದಿನಾಂಕ 19-05-2017 ರಂದು, ಅರಣ್ಯ ಬಿಡುಗಡೆ ಪ್ರಸ್ತಾವನೆಯಲ್ಲಿ ಅರಣ್ಯ ಇಲಾಖೆಯ ನಿಯಮಾವಳಿಗಳನ್ವಯ ಬದಲಿ ಅರಣ್ಯೀಕರಣಕ್ಕೆ 20 ಎಕರೆ ಜಮೀನು ನೀಡಬೇಕಾಗಿದ್ದು, ಸದರಿ ಅರಣ್ಯ ಬಿಡುಗಡೆ ಪ್ರಸ್ತಾವನೆಯಲ್ಲಿ ಇದರ ಬಗ್ಗೆ ತಿಳಿಸಿರುವುದಿಲ್ಲ ಎಂದು ನ್ಯೂನ್ಯತೆಯನ್ನು ಸೂಚಿಸಿ ಪ್ರಸ್ತಾವನೆಯನ್ನು ಹಿಂದಿರುಗಿಸಿರುತ್ತಾರೆ.<br>ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆ ತಾಲ್ಲೂಕಿನಲ್ಲಿ, ಅರಣ್ಯ ಇಲಾಖೆಯ ಸ್ವಾಧೀನದಲ್ಲಿರುವ, ಕವಿಪ್ರನಿನಿಗೆ ಸೇರಿದ 65 ಎಕರೆ 7 ಗುಂಟೆ ಜಮೀನಿನ ಪೈಕಿ 20 ಎಕರೆ ಜಮೀನನ್ನು ಅರಣ್ಯೀಕರಣದ ಸಂಬಂಧ ಹಸ್ತಾಂತರಿಸಲು ಜಮೀನಿನ ಲಭ್ಯತೆ ಹಾಗೂ ಗುರುತಿಸುವಿಕೆಗಾಗಿ ಸರ್ವೆ ಕಾರ್ಯವನ್ನು ಕೈಗೊಳ್ಳಲಾಯಿತು. ಬದಲಿ ಅರಣ್ಯೀಕರಣದ ದಾಖಲೆಗಳೊಂದಿಗೆ 7.723 ಹೆಕ್ಟೇರ್ ಅರಣ್ಯ ಭೂಮಿಯ ಬಿಡುಗಡೆಗಾಗಿ ಅರಣ್ಯ ಪ್ರಸ್ತಾವನೆಯನ್ನು ಆನ್‌ಲೈನ್‌ನಲ್ಲಿ 05-04-2018 ರಂದು ಮರು ಸಲ್ಲಿಸಲಾಗಿತ್ತು.<br>ಹೆಚ್ಚುವರಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) ಮತ್ತು ನೋಡಲ್ ಅಧಿಕಾರಿ, ಬೆಂಗಳೂರು ಇವರು ಸದರಿ ಮರುಪ್ರಸ್ತಾವನೆಯನ್ನು ಪರಿಶೀಲಿಸಿ, ದಿನಾಂಕ 05-05-2018 ರಂದು ನ್ಯೂನ್ಯತೆಗಳನ್ನು ಸೂಚಿಸಿ ಪ್ರಸ್ತಾವನೆಯನ್ನು ಪುನಃ ಹಿಂದಿರುಗಿಸಿರುತ್ತಾರೆ.<br>ಸದರಿ ನ್ಯೂನ್ಯತೆಗಳನ್ನು ಸರಿಪಡಿಸಿ 7.6522 ಹೆಕ್ಟೇರ್ ಅರಣ್ಯ ಭೂಮಿಯ ಬಿಡುಗಡೆಗಾಗಿ ಅರಣ್ಯ ಪ್ರಸ್ತಾವನೆಯನ್ನು ದಿನಾಂಕ 06-08-2018 ರಂದು ಆನ್‌ಲೈನ್‌ನಲ್ಲಿ ಮರು ಸಲ್ಲಿಸಲಾಯಿತು.<br>ಹೆಚ್ಚುವರಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಸಂರಕ್ಷಣೆ) ಮತ್ತು ನೋಡಲ್ ಅಧಿಕಾರಿ, ಬೆಂಗಳೂರು ಇವರು ಪ್ರಸ್ತಾವನೆಯನ್ನು ಮರುಪರಿಶೀಲಿಸಿ ದಿನಾಂಕ 27-09-2018 ರಂದು ಪ್ರಸ್ತಾವನೆಯಲ್ಲಿ ಕೆಲವು ನ್ಯೂನ್ಯತೆಗಳನ್ನು ಸರಿಪಡಿಸಿ ಸಲ್ಲಿಸಲು ಸೂಚಿಸಿರುತ್ತಾರೆ.<br>ಪ್ರಸರಣ ಮಾರ್ಗ ಹಾದುಹೋಗುವ ಪಂಕ್ತೀಕರಣದಲ್ಲಿ ಗ್ರಾಮವಾರು ಸರ್ವೆ ನಂಬರ್‌ನೊಂದಿಗೆ ವಿಸ್ತೀರ್ಣ ನೀಡಲು ಸೂಚಿಸಿದ್ದು, ನ್ಯೂನ್ಯತೆಯನ್ನು ಸರಿಪಡಿಸಿ ಶೀಘ್ರದಲ್ಲಿ ಪ್ರಸ್ತಾವನೆಯನ್ನು ಮರುಸಲ್ಲಿಸಲು ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. |
| ಆ) | ಹಾಗಿದ್ದಲ್ಲಿ, ಈ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳಲಾಗಿದೆ; ಯಾವ ಕಾಲಮಿತಿಯೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು (ಪೂರ್ಣ ಮಾಹಿತಿಯನ್ನು ನೀಡುವುದು) | |

ಸಂಖ್ಯೆ: ಇಎನ್ 34 ಪಿಪಿಎಂ 2019

(ಹೆಚ್.ಡಿ.ಕುಮಾರಸ್ವಾಮಿ)
ಮುಖ್ಯಮಂತ್ರಿ

## ಚುಕ್ಕೆ ರಹಿತ ಪ್ರಶ್ನೆ ಸಂಖ್ಯೆ: 818ಕ್ಕೆ ಅನುಬಂಧ-2

## ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯಲ್ಲಿ ಅನುದಾನಿತ ಪದವಿ ಕಾಲೇಜುಗಳ ಪಟ್ಟಿ 2018-19

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| | **ಬೆಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ಬೆಂಗಳೂರು ನಗರ ಜಿಲ್ಲೆ** |
| 1 | ನ್ಯಾಷನಲ್ ಕಾಲೇಜು ಬಸವನಗುಡಿ, ಬೆಂಗಳೂರು- 560 004. |
| 2 | ವಿಜಯಾ ಕಾಲೇಜು ,ಬಸವನಗುಡಿ, ಬೆಂಗಳೂರು - 560 004. |
| 3 | ಮೌಂಟ್ ಕಾರ್ಮೆಲ್ ಮಹಿಳಾ ಕಾಲೇಜು, ನಂ-58,ಅರಮನೆ ರಸ್ತೆ, ಬೆಂಗಳೂರು. - 560 052. |
| 4 | ಎಂ.ಇ.ಎಸ್ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು, - 560 003. |
| 5 | ಎಸ್.ಜೆ.ಆರ್.ಸಿ ಕಾಲೇಜು , ರೇಸ್ ಕೋರ್ಸ್ ರಸ್ತೆ, ಬೆಂಗಳೂರು - 560 009. |
| 6 | ಆಚಾರ್ಯ ಪಾಠಶಾಲಾ ಕಲಾ ಮತ್ತು ವಿಜ್ಞಾನ ಕಾಲೇಜು, ಎನ್.ಆರ್ ಕಾಲೋನಿ, ಬೆಂಗಳೂರು - 560 019. |
| 7 | ಎಸ್ ನಿಜಲಿಂಗಪ್ಪ ಪದವಿ ಕಾಲೇಜು, 2ನೇ ಬ್ಲಾಕ್ ರಾಜಾಜಿನಗರ, ಬೆಂಗಳೂರು - 560 010.. |
| 8 | ದಯಾನಂದ ಸಾಗರ ಕಲೆ ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು, ಶಾವಿಗೆ, ಮಲ್ಲೇಶ್ವರ ಹಿಲ್ಸ್, ಕುಮಾರಸ್ವಾಮಿ ಲೇಔಟ್, ಬೆಂಗಳೂರು-560078 |
| 9 | ಆಚಾರ್ಯ ಪಾಠಶಾಲಾ ಸಂಜೆ ಕಾಲೇಜು, ಎನ್.ಆರ್ ಕಾಲೋನಿ, ಬೆಂಗಳೂರು - 560 019. |
| 10 | ಬಿ.ಎಂ.ಎಸ್ ಮಹಿಳಾ ಕಾಲೇಜು, ಬಸವನಗುಡಿ ಬಗಲ್ ರಾಕ್ ರಸ್ತೆ/1, ಬೆಂಗಳೂರು 560 004. |
| 11 | ನ್ಯಾಷನಲ್ ಕಾಲೇಜು ಜಯನಗರ, ಬೆಂಗಳೂರು- 560 082. |
| 12 | ಜ್ಯೋತಿ ನಿವಾಸ ಮಹಿಳಾ ಕಾಲೇಜು, ಹೊಸೂರು ರಸ್ತೆ, ಬೆಂಗಳೂರು- 560 034. |
| 13 | ಎಸ್.ಎಲ್.ಎನ್ ಕಾಲೇಜು, ಕೋಟೆ, ಬೆಂಗಳೂರು - 560 002. |
| 14 | ವಿಶ್ವೇಶ್ವರಪುರಂ ಸಂಜೆ ಕಾಲೇಜು, ಕೆ.ಆರ್ ರಸ್ತೆ, ಬೆಂಗಳೂರು-560 004. |
| 15 | ವಿಶ್ವೇಶ್ವರಪುರಂ ವಿಜ್ಞಾನ ಕಾಲೇಜು, ಕೆ.ಆರ್ ರಸ್ತೆ, ಬೆಂಗಳೂರು-560 004. |
| 16 | ಅಲ್ ಅಮೀನ್ ಕಾಲೇಜು, ಹೊಸೂರು ರಸ್ತೆ, ಬೆಂಗಳೂರು - 560 027. |
| 17 | ಕ್ರೈಸ್ಟ್ ಕಾಲೇಜು ಹೊಸೂರು ರಸ್ತೆ, ಬೆಂಗಳೂರು - 560 029. |
| 18 | ಬಿ.ಇ.ಎಸ್ ಸಂಜೆ ಕಾಲೇಜು, 16ನೇ ಮುಖ್ಯ ರಸ್ತೆ, 4ನೇ ಎಕ್ಸ್‌ಟೇನಷನ್, ಜಯನಗರ ಬೆಂಗಳೂರು |
| 19 | ಶೇಷಾದ್ರಿಪುರಂ ಸಂಜೆ ಕಾಲೇಜು ,ಶೇಷಾದ್ರಿಪುರಂ, ಬೆಂಗಳೂರು-560 020 |
| 20 | ಬಿ.ಇ.ಎಸ್ ಕಾಲೇಜು, 16ನೇ ಮುಖ್ಯ ರಸ್ತೆ, 4ನೇ ಬ್ಲಾಕ್, ಜಯನಗರ ಬೆಂಗಳೂರು-560 011. |
| 21 | ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಮಹಿಳಾ ಕಾಲೇಜು, ಮಲ್ಲೇಶ್ವರಂ, ಬೆಂಗಳೂರು-560012 |
| 22 | ಸಂತ ಜೋಸೆಫರ ಕಲಾ ಮತ್ತು ವಿಜ್ಞಾನ ಕಾಲೇಜು , ಬೆಂಗಳೂರು-560 025 |
| 23 | ಸಂತ ಜೋಸೆಫರ ವಾಣಿಜ್ಯ ಕಾಲೇಜು, ನಂ.163, ಬ್ರಿಗೇಡ್ ರಸ್ತೆ ಬೆಂಗಳೂರು-560 025 |
| 24 | ಶೇಷಾದ್ರಿಪುರಂ ಕಾಲೇಜು, ಬೆಂಗಳೂರು-560 020 |
| 25 | ಎನ್. ಎಂ.ಕೆ.ಆರ್.ವಿ ಮಹಿಳಾ ಕಾಲೇಜು, 3ನೇ ಬ್ಲಾಕ್, ಜಯನಗರ, ಬೆಂಗಳೂರು- 560 011. |
| 26 | ಹಸನತ್ ಮಹಿಳಾ ಕಾಲೇಜು, ನಂ.43, ಡಿಕನ್ಸನ್ ರಸ್ತೆ, ಬೆಂಗಳೂರು- 560 042. |
| 27 | ಭಾಗೀರತಿ ಬಾಯಿ ನಾರಾಯಣ ರಾವ್ ಮನೆ ಮಹಿಳಾ ಕಾಲೇಜು, 12ನೇ ಮೈನ್, ಬನಶಂಕರಿ 2ನೇ ಹಂತ, ಬೆಂಗಳೂರು - 560 070. |
| 28 | ಸೆಂಟ್.ಜೋಸೆಫ್ ಸಂಜೆ ಕಾಲೇಜು, ಮ್ಯೂಸಿಯಂ ರಸ್ತೆ, ಬೆಂಗಳೂರು -560 025. |
| 29 | ಸಿ.ಎಮ್ ಎ ಅಬ್ಬಾಸ್ ಖಾನ್ ಮಹಿಳಾ ಕಾಲೇಜು, ಹಜ್ರತ್ ಹಾಮೀದ್ ಶಾವ್ ದರ್ಗಾ ಕಾಂಪೌಂಡ್, ಕಾಟ್ಟನ್‌ಪೇಟೆ, ಬೆಂಗಳೂರು- 560 002. |
| 30 | ವಿದ್ಯಾ ವರ್ದಕ ಮಹಿಳಾ ಕಾಲೇಜು, 2ನೇ ಬ್ಲಾಕ್, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು- 560 079. |
| 31 | ಡಾ:ಅಂಬೇಡ್ಕರ್ ಕಾಲೇಜು, ಹೆಚ್.ಎ.ಎಲ್. 2ನೇ ಹಂತ, ಇಂದಿರಾನಗರ, ಬೆಂಗಳೂರು- 560 038. |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 32 | ಭಾರತೀಯ ಸಂಸ್ಕೃತಿ ವಿದ್ಯಾಪೀಠ ಮಹಿಳಾ ಕಾಲೇಜು, ವಿಜಯನಗರ, ಬೆಂಗಳೂರು-560040 |
| 33 | ಪಿ.ಇ.ಎಸ್. ಕಾಲೇಜು, ಬನಶಂಕರಿ 1ನೇ ಹಂತ, ಹನುಮಂತನಗರ, ಬೆಂಗಳೂರು- 560 050. |
| 34 | ವಿವೇಕಾನಂದ ಕಾಲೇಜು, 2ನೇ ಹಂತ, ರಾಜಾಜಿನಗರ, ಬೆಂಗಳೂರು- 560 055. |
| 35 | ಬಸವೇಶ್ವರ ಕಾಲೇಜು, 2ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು- 560 010. |
| 36 | ಎಸ್.ಎಸ್.ಎಂ.ಆರ್.ವಿ.ಕಾಲೇಜು, 24ನೇ ಮೈನ್, 1ನೇ ಹಂತ,ಜ ಪಿ ನಗರ, ಬೆಂಗಳೂರು- 560 078 |
| 37 | ವಾಸವಿ ವಿದ್ಯಾನಿಕೇತನ ಮಹಿಳಾ ಕಾಲೇಜು, ನಂ.3, ವಾಣಿವಿಲಾಸ ರಸ್ತೆ, ಬೆಂಗಳೂರು- 560 004. |
| 38 | ಆರ್.ಬಿ.ಎ.ಎನ್.ಎಂ.ಎಸ್. ಪ್ರಥಮ ದರ್ಜೆ ಕಾಲೇಜು, ನಂ.12, ಅಣ್ಣಸ್ವಾಮಿ ಮೊದಲಿಯಾರ್ ರಸ್ತೆ, ಬೆಂಗಳೂರು- 560 042. |
| 39 | ವಿಶ್ವೇಶ್ವರಪುರಂ ಕಲಾ ಮತ್ತು ವಾಣಿಜ್ಯ ಕಾಲೇಜು, ಕೆ.ಆರ್ ರಸ್ತೆ, ಬೆಂಗಳೂರು- 560 004. |
| 40 | ಶ್ರೀ ವೀರೇಂದ್ರ ಪಾಟೀಲ್ ಪ್ರಥಮ ದರ್ಜೆ ಕಾಲೇಜು, 2ನೇ ಮೈನ್, 2ನೇ ಕ್ರಾಸ್, ರಾಜ್ ಮಹಲ್ ವಿಲಾಸ ಎಕ್ಸ್‌ಟೇನಶನ್, ಸದಾಶಿವನಗರ, ಬೆಂಗಳೂರು-560080 |
| 41 | ಮಲ್ಲೇಶ್ವರಂ ಮಹಿಳಾ ಪ್ರಥಮ ದರ್ಜೆ ಕಾಲೇಜು, 14ನೇ ಕ್ರಾಸ್, ಮಲೇಶ್ವರಂ, ಬೆಂಗಳೂರು- 560 003. |
| 42 | ಆಚಾರ್ಯ ಪಾಠಶಾಲಾ ವಾಣಿಜ್ಯ ಕಾಲೇಜು, ಎನ್.ಆರ್. ಕಾಲೋನಿ, ಬೆಂಗಳೂರು- 560 019. |
| 43 | ಹಸನತ್ ಪ್ರಥಮ ದರ್ಜೆ ಬಾಲಕರ ಕಾಲೇಜು, ನಂ.8, ಶಿವಾಜಿ ರಸ್ತೆ, ಬೆಂಗಳೂರು- 560 051. |
| 44 | ಹೆಚ್.ಕೆ.ಇ.ಎಸ್ ಪದವಿ ಪೂರ್ವ ಕಾಲೇಜು, ಬೆಂಗಳೂರು |
| | **ಬೆಂಗಳೂರು ಗ್ರಾಮಾಂತರ ಜಿಲ್ಲೆ** |
| 45 | ಶ್ರೀ ಕೊಂಗಾಡಿಯಪ್ಪ ಕಾಲೇಜು, ನಂ:17, ದೊಡ್ಡಬಳ್ಳಾಪುರ-561 203. |
| 46 | ಶ್ರೀ ಸಿದ್ದಗಂಗಾ ಕಲಾ ಮತ್ತು ವಾಣಿಜ್ಯ ಕಾಲೇಜು, ನೆಲಮಂಗಲ- 562 123. |
| | **ರಾಮನಗರ ಜಿಲ್ಲೆ** |
| 47 | ರೂರಲ್ ಕಾಲೇಜು, ಕನಕಪುರ - 562 117. |
| 48 | ಕುವೆಂಪು ಕಾಲೇಜು, ಕೆಂಗಲ್, ಚನ್ನಪಟ್ಟಣ-571 502 |
| | **ಚಿಕ್ಕಬಳ್ಳಾಪುರ ಜಿಲ್ಲೆ** |
| 49 | ಆಶ್ವಥಯ್ಯ ಈಸ್ತೂರು ಸಂಜೀವಮ್ಮ  ನ್ಯಾಷನಲ್ ಕಾಲೇಜು, ಗೌರಿಬಿದನೂರು-561 208. |
| 50 | ನ್ಯಾಷನಲ್ ಕಾಲೇಜು, ಬಾಗೇಪಲ್ಲಿ- 561 207. |
| 51 | ಆಚಾರ್ಯ ಮಹಿಳಾ ಪ್ರಥಮ ದರ್ಜೆ ಕಾಲೇಜು, ಗೌರಿಬಿದನೂರು - 561 208. |
| | **ಕೋಲಾರ ಜಿಲ್ಲೆ** |
| 52 | ಕೆ.ಜಿ.ಎಫ್ ಕಾಲೇಜು, ಊರಿಗಾಂ, ಕೆ.ಜಿ.ಎಫ್.- 563 120, (ಬಂಗಾರಪೇಟೆ ತಾ:) |
| | **ತುಮಕೂರು ಜಿಲ್ಲೆ** |
| 53 | ಪಲ್ಲಾಗಟ್ಟಿ ಅಡವಪ್ಪ ಕಲಾ ಮತ್ತು ವಾಣಿಜ್ಯ ಕಾಲೇಜು, ತಿಪಟೂರು-572 202. |
| 54 | ಶ್ರೀ ಸಿದ್ದಗಂಗಾ ಬಾಲಕರ ಕಾಲೇಜು, ತುಮಕೂರು - 572 102. |
| 55 | ಟಿ.ವಿ.ವೆಂಕಟಸ್ವಾಮಿ ಕಾಲೇಜು, ಮಧುಗಿರಿ- 572 182. |
| 56 | ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು, ತುಮಕೂರು - 572 102. |
| 57 | ಶ್ರೀ ಸಿದ್ಧಗಂಗಾ ಕಲಾ ಮತ್ತು ವಾಣಿಜ್ಯ ಸಂಜೆ ಕಾಲೇಜು, ತುಮಕೂರು - 572 102. |
| 58 | ಕಲ್ಪತರು ಪ್ರಥಮ ದರ್ಜೆ ಕಾಲೇಜು, ತಿಪಟೂರು - 572 202. |
| 59 | ನವೋದಯ ಪ್ರಥಮ ದರ್ಜೆ ಕಾಲೇಜು, ಚಿಕ್ಕನಾಯಕನಹಳ್ಳಿ- 572 214. |
| 60 | ಶ್ರೀ ಸಿದ್ದಾರ್ಥ ಪ್ರಥಮ ದರ್ಜೆ ಕಾಲೇಜು, ಕುಣಿಗಲ್ ರಸ್ತೆ, ತುಮಕೂರು - 572 105. |
| 61 | ಯೂನಿಯನ್ ಕ್ರಿಶ್ಚಿಯನ್ ಪ್ರಥಮ ದರ್ಜೆ ಕಾಲೇಜು, ಸಿರಾ ಗೇಟ್, ತುಮಕೂರು- 572 106. |
| 62 | ಉಮಾ ಪ್ರಗತಿ ಡಿಗ್ರಿ ಕಾಲೇಜು, ಕ್ಯಾತಸಂದ್ರ, ತುಮಕೂರು |
| 63 | ಬಾಬು ಜಗಜೀವನರಾಮ್ ಪ್ರಥಮ ದರ್ಜೆ ಕಾಲೇಜು, ತುಮಕೂರು |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| [illegible] | ಉದಯ ಭಾರತಿ ಪ್ರಥಮ ದರ್ಜೆ ಕಾಲೇಜು, ತಿಪಟೂರು |
| | **ಮೈಸೂರು ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ಮೈಸೂರು ಜಿಲ್ಲೆ** |
| 65 | ಶಾರದಾ ವಿಲಾಸ ಕಾಲೇಜು , ಮೈಸೂರು-570 004 |
| 66 | ಸಂತ.ಫಿಲೋಮಿನಾ ಕಾಲೇಜು, ಮೈಸೂರು- 570 015. |
| 67 | ಡಿ.ಬನುಮಯ್ಯ ಕಾಲೇಜು, ನಂ-202, ನೈ ಸಯ್ಯಾಜಿ ರಾವ್ ರಸ್ತೆ, ಮೈಸೂರು- 570 024. |
| 68 | ಟೇರಿಷೀಯನ್ ಮಹಿಳಾ ಕಾಲೇಜು, ಮೈಸೂರು – 570 011. |
| 69 | ಜೆ.ಎಸ್.ಎಸ್. ಕಾಲೇಜು, ಊಟಿ ರಸ್ತೆ, ಮೈಸೂರು- 570 004. |
| 70 | ಜಗದ್ಗುರು ಶ್ರೀ ಶಿವರಾತ್ರೇಶ್ವರ ಕಾಲೇಜು, ನಂಜನಗೂಡು – 571 301. |
| 71 | ಜೆ.ಎಸ್.ಎಸ್.ಮಹಿಳಾ ಕಾಲೇಜು, ಸರಸ್ವತಿಪುರ, ಮೈಸೂರು- 570 009. |
| 72 | ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು ಶೇಷಾದ್ರಿ ಐಯ್ಯರ್ ರೋಡ್, ಮೈಸೂರು- 570 021. |
| 73 | ಬಾಸುದೇವ್ ಸೋಮಾನಿ ಕಾಲೇಜು, ವಿಶ್ವ ಮಾನವ ಜಾಯಿಂಟ್ ರಸ್ತೆ, ಕುವೆಂಪುನಗರ, ಮೈಸೂರು- 570 023. |
| 74 | ವಿದ್ಯೋದಯ ಕಾಲೇಜು, ಟಿ.ನರಸೀಪುರ – 571 124. |
| 75 | ಶ್ರೀಮತಿ ಭಾಗ್ಯಲಕ್ಷ್ಮಮ್ಮ ರಾತಿಹಳ್ಳಿ ರಾಮಪ್ಪ ಮಹಾಜನ ಕಾಲೇಜು, ಜಯಲಕ್ಷ್ಮೀಪುರಂ, ಮೈಸೂರು – 570 012. |
| 76 | ಮಲ್ಲಮ್ಮ ಮರಿಮಲ್ಲಪ್ಪ ಮಹಿಳಾ ಕಾಲೇಜು, ರಾಮವಿಲಾಸ ರಸ್ತೆ, ಮೈಸೂರು- 570 024. |
| 77 | **ಶ್ರೀ ಚನ್ನಕೇಶವ ಪ್ರಥಮ ದರ್ಜೆ ಕಾಲೇಜು, ಸಾಲಿಗ್ರಾಮ** |
| | **ಚಾಮರಾಜನಗರ ಜಿಲ್ಲೆ** |
| 78 | ಜೆ.ಎಸ್.ಎಸ್.ಮಹಿಳಾ ಕಾಲೇಜು, ಚಾಮರಾಜನಗರ- 571 313. |
| 79 | ಜೆ.ಎಸ್.ಎಸ್.ಕಾಲೇಜು, ಗುಂಡ್ಲಪೇಟೆ – 571 111. |
| 80 | ಜೆ.ಎಸ್.ಎಸ್.ಮಹಿಳಾ ಕಾಲೇಜು, ಕೊಳ್ಳೇಗಾಲ – 571 440 |
| 81 | ಬಿಳಿಗಿರಿ ಡಿಗ್ರಿ ಕಾಲೇಜು, ಚಾಮರಾಜನಗರ |
| | **ಮಂಡ್ಯ ಜಿಲ್ಲೆ** |
| 82 | ಪಿ.ಇ.ಎಸ್ ವಿಜ್ಞಾನ ಕಾಲೇಜು, ಮಂಡ್ಯ-571 401 |
| 83 | ಪಿ.ಇ.ಎಸ್.ಸಂಜೆ ಕಾಲೇಜು, ಮಂಡ್ಯ – 571 401. |
| 84 | ಶಾಂತಿ ಕಾಲೇಜು, ಮಳವಳ್ಳಿ – 571 403. |
| 85 | ಭಾರತಿ ಕಾಲೇಜು, ಭಾರತಿನಗರ-571 422, (ಮಳವಳ್ಳಿ ತಾ.) |
| 86 | ಶ್ರೀ ಆದಿಚುಂಚನಗಿರಿ ಕಾಲೇಜು, ನಾಗಮಂಗಲ-571 482. |
| 87 | ಹೆಚ್.ಕೆ.ವೀರಣ್ಣ ಗೌಡ ಕಾಲೇಜು, ಮದ್ದೂರು – 571 428. |
| 88 | ವಿಜಯ ಪ್ರಥಮ ದರ್ಜೆ ಕಾಲೇಜು, ಪಾಂಡವಪುರ – 571 434. |
| 89 | ಪೂರಿಗಾಲಿ ಪಿ ಎಲ್ ಎನ್ ಕಲಾ ಕಾಲೇಜು, ಮಳವಳ್ಳಿ, ಮಂಡ್ಯ ಜಿಲ್ಲೆ |
| | **ಹಾಸನ ಜಿಲ್ಲೆ** |
| 90 | ಅರಕಲಗೂಡು ವರದರಾಜಲು ಕಾಂತಮ್ಮ ಮಹಿಳಾ ಕಾಲೇಜು, ಹಾಸನ – 573 201. |
| 91 | ಹೊಯ್ಸಳೇಶ್ವರ ಕಾಲೇಜು, ಅರಸೀಕೆರೆ – 573 103. |
| 92 | ಎನ್.ಡಿ.ಆರ್.ಕೆ.ಪ್ರಥಮ ದರ್ಜೆ ಕಾಲೇಜು, ಹಾಸನ-573 201 |
| 93 | ಶ್ರೀ ಆದಿಚುಂಚನಗಿರಿ ಪ್ರಥಮ ದರ್ಜೆ ಕಾಲೇಜು, ಚನ್ನರಾಯಪಟ್ಟಣ-573 116. |
| 94 | ಎ.ಎನ್.ವರದರಾಜುಲು ಪ್ರಥಮ ದರ್ಜೆ ಕಾಲೇಜು, ಗೊರೂರು-573 120. |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| | **ಕುವೆಂಪು ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ಶಿವಮೊಗ್ಗ ಜಿಲ್ಲೆ** |
| 95 | ಲಾಲ್ ಬಹದ್ದೂರ್ ಮತ್ತು ಎಸ್ ಬಿ ಸೊಲಬಣ್ಣ ಶೆಟ್ಟಿ ಕಾಲೇಜು, ಸಾಗರ-577401 |
| 96 | ಕಮಲಾ ನೆಹರು ಮಹಿಳಾ ಕಾಲೇಜು, ಶಿವಮೊಗ್ಗ – 577 201. |
| 97 | ಡಿ.ವಿ.ಎಸ್ ಕಾಲೇಜು, ಶಿವಮೊಗ್ಗ-577 201 |
| 98 | ರಾಷ್ಟ್ರೀಯ ಆಚಾರ್ಯ ತುಳಸಿ ವಾಣಿಜ್ಯ ಕಾಲೇಜು, ಶಿವಮೊಗ್ಗ – 577 201. |
| 99 | ತುಂಗಾ ಕಾಲೇಜು, ಆನಂದಗಿರಿ, ತೀರ್ಥಹಳ್ಳಿ – 577 432. |
| 100 | ಡಿ.ವಿ.ಎಸ್ ಸಂಜೆ ಕಾಲೇಜು, ಶಿವಮೊಗ್ಗ- 577 201. |
| 101 | ಎನ್.ಇ.ಎಸ್. ವಿದ್ಯಾ ಎಜುಕೇಷನ್ ಸೋಸೈಟಿ ಶರಾವತಿ ಪ್ರಥಮ ದರ್ಜೆ ಕಾಲೇಜು, ಕೊಣಂದೂರು-577422 |
| 102 | ಕದಂಬ ಪ್ರಥಮ ದರ್ಜೆ ಕಾಲೇಜು, ಶಿರಾಳಕೊಪ್ಪ, ಶಿಕಾರಿಪುರ ತಾ. |
| 103 | ಹೆಬ್ಬೂರು ಕಲಾ ಮತ್ತು ವಾಣಿಜ್ಯ ಪ್ರಥಮ ದರ್ಜೆ ಕಾಲೇಜು ಭದ್ರಾವತಿ |
| | **ಚಿತ್ರದುರ್ಗ ಜಿಲ್ಲೆ** |
| 104 | ಎಸ್.ಜೆ.ಎಂ ಕಾಲೇಜು, ಚಿತ್ರದುರ್ಗ- 577 501. |
| 105 | ಎಂ.ಬಸವಯ್ಯ ರೆಸಿಡೆನ್ಷಿಯಲ್ ಕಾಲೇಜು, ಸಿರಿಗೆರೆ – 577 541, (ಚಿತ್ರದುರ್ಗ ತಾಲ್ಲೂಕು) |
| 106 | ಟಿ ಪರಮೇಶ್ವರಪ್ಪ ಕಾಲೇಜು, ಹೊಳಲ್ಕೆರೆ – 577 526. |
| 107 | ಎಸ್.ಜೆ.ಎಂ ಮಹಿಳಾ ಕಾಲೇಜು, ಚಿತ್ರದುರ್ಗ- 577 501. |
| 108 | ಮಹಾರಾಜ ಮದಕರಿ ನಾಯಕ ಪ್ರಥಮ ದರ್ಜೆ ಕಾಲೇಜು, ಕಮ್ಮನಬಾವಿ ಬಡಾವಣೆ, ಚಿತ್ರದುರ್ಗ- 577 501 |
| 109 | ಬಾಪೂಜಿ ಡಿಗ್ರಿ ಕಾಲೇಜು, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ |
| 110 | ಶ್ರೀ ವೆಂಕಟೇಶ್ವರ ಪ್ರಥಮ ದರ್ಜೆ ಕಾಲೇಜು, ಚಿತ್ರದುರ್ಗ |
| 111 | ಶ್ರೀಮತಿ ಯಶೋಧರಮ್ಮ ಬೋರಪ್ಪ ಪ್ರಥಮ ದರ್ಜೆ ಮಹಿಳಾ ಕಾಲೇಜು, ಚಿತ್ರದುರ್ಗ |
| 112 | ಶ್ರೀಮತಿ ಕೋಟೆ ಬೋರಮ್ಮ ಪ್ರಥಮ ದರ್ಜೆ ಕಾಲೇಜು, ಚಳ್ಳಕೆರೆ |
| 113 | ಶ್ರೀ ಕೋಟೆ ಸಣ್ಣ ಬೋರಪ್ಪ, ಬೋರಮ್ಮ ಪ್ರಥಮ ದರ್ಜೆ ಕಾಲೇಜು, ಐಮಂಗಲ, ಹಿರಿಯೂರು |
| | **ದಾವಣಗೆರೆ ಜಿಲ್ಲೆ** |
| 114 | ಎ.ವಿ ಕಮಲಮ್ಮ ಮಹಿಳಾ ಕಾಲೇಜು, ದಾವಣಗೆರೆ – 577 002. |
| 115 | ಎಸ್.ಜೆ.ವಿ.ಪಿ ಕಾಲೇಜು, ಹರಿಹರ-577601 |
| 116 | ಅಬ್ಲಿದೊಡ್ಡ ಭರಮಪ್ಪ ಕಾಲೇಜು, ಹರಪನಹಳ್ಳಿ – 583 131. |
| 117 | ಹೆಚ್.ಪಿ.ಎಸ್ ಕಾಲೇಜು, ಹರಪನಹಳ್ಳಿ – 583 131. |
| 118 | ಎ.ಆರ್.ಜಿ ಕಾಲೇಜು, ದಾವಣಗೆರೆ – 577 004. |
| 119 | ಡಿ.ಆರ್.ಎಂ ವಿಜ್ಞಾನ ಕಾಲೇಜು, ದಾವಣಗೆರೆ – 577 004. |
| 120 | ಶ್ರೀ ಮೃತ್ಯುಂಜಯ ಶಿವಾಚಾರ್ಯ ಪ್ರಥಮ ದರ್ಜೆ ಕಾಲೇಜು, ಹಿರೆಕಲ್‌ಮಠ (ಹೊನ್ನಾಳಿ ತಾಲ್ಲೂಕು.) |
| 121 | ಎಂ.ಎಸ್.ಬಿ ಪ್ರಥಮ ದರ್ಜೆ ಕಾಲೇಜು, ಅಕ್ಕಮಹಾದೇವಿ ರಸ್ತೆ, ಪಿ ಜಿ ಎಕ್ಸ್‌ಟೇನಶನ್, ದಾವಣಗೆರೆ – 577 002. |
| 122 | ಹೆಚ್.ಸಿ ಭೂರಯ್ಯ ಮೆಮೋರಿಯಲ್ ಪ್ರಥಮ ದರ್ಜೆ ಕಾಲೇಜು. ಜಗಳೂರು – 577 528. |
| 123 | ಶ್ರೀಮತಿ ಜಿ.ಆರ್.ಕೆ.ಎಸ್ ಪ್ರಥಮ ದರ್ಜೆ ಕಾಲೇಜು, ಹರಿಹರ- 577 601. |
| 124 | ಎ.ಆರ್.ಎಮ್ ಡಿಗ್ರಿ ಕಾಲೇಜು, ದಾವಣಗೆರೆ |
| 125 | ಶ್ರೀ ಮಂಜುನಾಥಶ್ವೇರ ಡಿಗ್ರಿ ಕಾಲೇಜು. ದಾವಣಗೆರೆ |
| 126 | ಡಾ.ಬಾಬಾಸಾಹೇಬ್ ಅಂಬೇಡ್ಕರ್ ಸೆನ್ಟೆನರಿ ಕಲಾ ಮತ್ತು ವಾಣಿಜ್ಯ ಕಾಲೇಜು. ಹರಿಹರ |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
| --- | --- |
| 127 | ಎ.ಡಿ.ವಿ.ಎಸ್. ಪ್ರಥಮ ದರ್ಜೆ ಕಾಲೇಜು, ಸಾಸಿವೆಹಳ್ಳಿ, ಹೊನ್ನಾಳಿ ತಾ |
| 128 | ಶ್ರೀ ದೇವರಾಜ ಅರಸು ಪ್ರಥಮ ದರ್ಜೆ ಕಾಲೇಜು, ಹನೂರು, ದಾವಣಗೆರೆ |
| 129 | ಶ್ರೀ ರಾಜರಾಜೇಶ್ವರಿ ಪ್ರಥಮ ದರ್ಜೆ ಕಾಲೇಜು, ಜಗಳೂರು, ದಾವಣಗೆರೆ |
| | **ಚಿಕ್ಕಮಗಳೂರು ಜಿಲ್ಲೆ** |
| 130 | ಶ್ರೀ ಜೆ.ಸಿ.ಬಿ.ಎಂ ಕಾಲೇಜು, ಶೃಂಗೇರಿ – 577 139. |
| 131 | ಪಿ.ಜೆ.ಎನ್.ಎಂ ಕಾಲೇಜು, ಬೀರೂರು – 577 116, (ಕಡೂರು ತಾಲ್ಲೂಕು.) |
| 132 | ಎಸ್.ಟಿ.ಜೆ.ಮಹಿಳಾ ಪ್ರಥಮ ದರ್ಜೆ ಕಾಲೇಜು, ಚಿಕ್ಕಮಗಳೂರು – 577 101. |
| 133 | ಎಸ್. ಜೆ.ಎಂ ಪ್ರಥಮ ದರ್ಜೆ ಕಾಲೇಜು ಕಲಾ ಮತ್ತು ವಾಣಿಜ್ಯ ಕಾಲೇಜು, ತರೀಕೆರೆ |
| | **ಮಂಗಳೂರು ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ದಕ್ಷಿಣ ಕನ್ನಡ ಜಿಲ್ಲೆ** |
| 134 | ಸಂತ ಅಗ್ನೇಸ್ ಕಾಲೇಜು, ಮಂಗಳೂರು – 575 002. |
| 135 | ಸಂತ ಫಿಲೋಮಿನ ಕಾಲೇಜು ಪಿಲೋಮಿನ ನಗರ, ಪುತ್ತೂರು– 574 202. |
| 136 | ವಿಜಯಾ ಕಾಲೇಜು, ಮುಲ್ಕಿ – 574 154. |
| 137 | ವಿವೇಕಾನಂದ ಕಾಲೇಜು, ನೆಹರು ನಗರ, ಪುತ್ತೂರು–574 201. |
| 138 | ಸಂತ ಅಲೋಷಿಯಸ್ ಸಂಜೆ ಕಾಲೇಜು, ಮಂಗಳೂರು–575 003. |
| 139 | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ – 574 240, (ಬೆಳ್ತಂಗಡಿ ತಾಲ್ಲೂಕು) |
| 140 | ಸ್ಕೂಲ್ ಆಫ್ ಸೋಷಿಯಲ್ ವರ್ಕ್ ರೋಷನಿ ನಿಲಯ, ಮಂಗಳೂರು– 575 003. |
| 141 | ಗೋವಿಂದ ದಾಸ ಕಾಲೇಜು, ಸೂರತ್ಕಲ್ – 575 014, (ಮಂಗಳೂರು ತಾಲ್ಲೂಕು.) |
| 142 | ಶ್ರೀ ವೆಂಕಟರಮಣಸ್ವಾಮಿ ಕಾಲೇಜು, ಬಂಟ್ವಾಳ–574 211. |
| 143 | ಕೆನರ ಪ್ರಥಮ ದರ್ಜೆ ಕಾಲೇಜು, ಎಂ.ಜಿ ರಸ್ತೆ ,ಮಂಗಳೂರು–575 003. |
| 144 | ನೆಹರು ಮೆಮೋರಿಯಲ್ ಕಾಲೇಜು, ಕುರುಂಜಿ ಭಾಗ್, ಸುಳ್ಯ–327. |
| 145 | ಬೆಸಂಟ್ ಮಹಿಳಾ ಕಾಲೇಜು, ಮಂಗಳೂರು– 575 003. |
| 146 | ಬೆಸಂಟ್ ಸಂಜೆ ಕಾಲೇಜು, ಮಂಗಳೂರು – 575 003. |
| 147 | ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಮಂಗಳೂರು– 575 003. |
| 148 | ಸಂತ ಅಲೋಷಿಯಸ್ ಕಾಲೇಜು, ಮಂಗಳೂರು– 575 003. |
| 149 | ಪೊಂಪಯಿ ಕಾಲೇಜು, ಐಕಲ ಅಂಚೆ– 574 141, (ಮಂಗಳೂರು ಜಿಲ್ಲೆ) |
| 150 | ಶ್ರೀ ಗೋಕರ್ಣನಾಥೇಶ್ವರ ಕಾಲೇಜು, ಗಾಂಧಿ ನಗರ, ಮಂಗಳೂರು– 575 003. |
| 151 | ಸೇಕ್ರಡ್ ಹಾರ್ಟ್ ಕಾಲೇಜು, ಮದನ್ ತಿಯಾರ್– 574 224,(ಬೆಳ್ತಂಗಡಿ ತಾಲ್ಲೂಕು) |
| 152 | ಕುಕ್ಕೆ ಶ್ರೀ ಸುಬ್ರಹ್ಮಣ್ಯೇಶ್ವರ ಪ್ರಥಮ ದರ್ಜೆ ಕಾಲೇಜು, ಸುಬ್ರಹ್ಮಣ್ಯ–574 238, (ಸುಳ್ಯ ತಾಲ್ಲೂಕು.) |
| | **ಉಡುಪಿ ಜಿಲ್ಲೆ** |
| 153 | ಮಹಾತ್ಮ ಗಾಂಧಿ ಮೆಮೋರಿಯಲ್ ಕಾಲೇಜು, ಉಡುಪಿ– 576 102. |
| 154 | ಪೂರ್ಣ ಪ್ರಜ್ಞ ಕಾಲೇಜು, ಉಡುಪಿ– 576 101. |
| 155 | ಶ್ರೀ ಭುವನೇಂದ್ರ ಕಾಲೇಜು, ಕಾರ್ಕಳ– 574 104. |
| 156 | ಭಂಡಾರ್‌ಕರ್ ಕಾಲೇಜು ,ಕುಂದಾಪುರ – 576 201. |
| 157 | ಮಹಾವೀರ ಕಾಲೇಜು, ಮೂಡಬಿದ್ರೆ, ಕೋಡಂಗಲ್ಲು – 576 197, (ಕಾರ್ಕಳ ತಾಲ್ಲೂಕು) |
| 158 | ಪೂರ್ಣ ಪ್ರಜ್ಞ ಸಂಜೆ ಕಾಲೇಜು, ಉಡುಪಿ– 576 101. |
| 159 | ಮಿಲಾಗ್ರೆಸ್ ಕಾಲೇಜು, ಕಲ್ಯಾಣಪುರ– 576 114, (ಉಡುಪಿ ತಾಲ್ಲೂಕು) |
| 160 | ಶ್ರೀ ಶಾರದಾ ಕಾಲೇಜು, ಬಸ್ರೂರು,– 576 211, (ಕುಂದಾಪುರ ತಾಲ್ಲೂಕು) |
| 161 | ಶ್ರೀ ಧವಳ ಕಾಲೇಜು, ಮೂಡಬಿದ್ರೆ – 574 227, (ಕಾರ್ಕಳ ತಾಲ್ಲೂಕು) |
| 162 | ಓ.ಎಸ್.ಸಿ ಎಜುಕೇಷನ್ ಟ್ರಸ್ಟ್, ಸಂತ ಮೇರಿ ಸಿರಿಯನ್ ಕಾಲೇಜು, ಬ್ರಹ್ಮಾವರ– 576 213. (ಉಡುಪಿ ತಾಲ್ಲೂಕು) |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 163 | ಮುಲ್ಕಿ ಸುಂದರ ರಾಂಶೆಟ್ಟಿ ಕಾಲೇಜು, ಶಿರ್ವ – 574 116. (ಉಡುಪಿ ತಾಲ್ಲೂಕು) |
| 164 | ಸಂತ ಮೇರಿ ಕಾಲೇಜು, ಶಿರ್ವ – 574 116, (ಉಡುಪಿ ತಾಲ್ಲೂಕು) |
| 165 | ಕ್ರಾಸ್ ಲ್ಯಾಂಡ್ ಕಾಲೇಜು, ಬ್ರಹ್ಮಾವರ–576 213 (ಉಡುಪಿ ತಾಲ್ಲೂಕು) |
| | **ಕೊಡಗು ಜಿಲ್ಲೆ** |
| 166 | ಕಾವೇರಿ ಪದವಿ ಕಾಲೇಜು, ಗೋಣಿಕೊಪ್ಪಲು – 571 213, (ವಿರಾಜಪೇಟೆ ತಾಲ್ಲೂಕು.) |
| 167 | ಕಾವೇರಿ ಮಹಿಳಾ ಕಾಲೇಜು, ವಿರಾಜಪೇಟೆ– 571 218 |
| | **ಕರ್ನಾಟಕ ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿನ ಖಾಸಗಿ ಅನುದಾನಿತ ಕಾಲೇಜುಗಳ ವಿವರಗಳು** |
| | **ಧಾರವಾಡ ಜಿಲ್ಲೆ.** |
| 168 | ಜೆ.ಎಸ್.ಎಸ್.ಬನಶಂಕರಿ ಮತ್ತು ಶಾಂತಕುಮಾರ್ ಗುಬ್ಬಿ ವಿಜ್ಞಾನ ಕಾಲೇಜು, ವಿದ್ಯಾಗಿರಿ, ಧಾರವಾಡ–580004 |
| 169 | ಜಗದ್ಗುರು ಗಂಗಾಧರ ವಾಣಿಜ್ಯ ಕಾಲೇಜು, ಹುಬ್ಬಳ್ಳಿ – 580 021. |
| 170 | ಶ್ರೀ ಕಾಡಸಿದ್ದೇಶ್ವರ ಕಲಾ ಮತ್ತು ಹೆಚ್.ಎಸ್.ಕೋತಂಬರಿ ವಿಜ್ಞಾನ ಟ್ರಸ್ ಕಾಲೇಜು, ವಿದ್ಯಾನಗರ, ಹುಬ್ಬಳ್ಳಿ–580 031 |
| 171 | ಪಿ.ಸಿ.ಜಬಿನಾ ವಿಜ್ಞಾನ ಕಾಲೇಜು, ವಿದ್ಯಾನಗರ, ಹುಬ್ಬಳ್ಳಿ – 580 031. |
| 172 | ನೆಹರು ಕಾಲೇಜು, ಗಂಟಕೇರಿ, ಹುಬ್ಬಳ್ಳಿ– 580 020. |
| 173 | ಎಸ್.ಜೆ.ಎಂ.ವಿ. ಮಹಿಳಾ ಕಾಲೇಜು, ಜಯ ಚಾಮರಾಜನಗರ, ಹುಬ್ಬಳ್ಳಿ– 580 020. |
| 174 | ಕಿಟ್ಟಲ್ ಕಲಾ ಕಾಲೇಜು, ಧಾರವಾಡ–580 001 |
| 175 | ಶ್ರೀ ಶಂಕರ್ ಕಾಲೇಜು, ನವಲಗುಂದ– 580 208. |
| 176 | ಶ್ರೀ ಮೃತ್ಯುಂಜಯ ಕಾಲೇಜು, ದುರ್ಗಾ ದೇವಸಾನ ಹತ್ತಿರ, ಧಾರವಾಡ – 580 008. |
| 177 | ಸಿ.ಎಸ್.ಐ. ಕಾಲೇಜು, ಧಾರವಾಡ – 580 001 |
| 178 | ಅಂಜುಮಾನ್.ಎಜುಕೇಷನ್ ಸೋಸೈಟಿ ಕಾಲೇಜು, ಧಾರವಾಡ – 580 001. |
| 179 | ಹೆಚ್.ಎ.ಎಸ್.ಎಸ್ ಕಾಲೇಜು, ದುರ್ಗಾ ದೇವಸ್ಥಾನ ಹತ್ತಿರ, ಧಾರವಾಡ –580008 |
| 180 | ಗುಡ್ ನ್ಯೂಸ್ ವೆಲ್‌ಫೇರ್ ,ಸೊಸೈಟಿ ಪ್ರಥಮ ದರ್ಜೆ ಕಾಲೇಜು, ಕಲಘಟಗಿ–581204 |
| 181 | ಗ್ರೂಪ್ ಎಜುಕೇಷನ್ ಕಮಿಟಿ ಪ್ರಥಮ ದರ್ಜೆ ಕಾಲೇಜು, ಕುಂದಗೋಳ್–581 113. (ಧಾರವಾಡ ಜಿಲ್ಲೆ) |
| 182 | ಮಹಾಂತ ಪ್ರಥಮ ದರ್ಜೆ ಕಾಲೇಜು, ಧಾರವಾಡ |
| 183 | ಕಿಟ್ಟಲ್ ವಿಜ್ಞಾನ ಕಾಲೇಜು, ಧಾರವಾಡ – 580 001. |
| 184 | ಶರಣಬುಲಿ ಚಂದಯ್ಯ ಸ್ಮಾರಕ ಡಾ. ಬಿ.ಆರ್. ಅಂಬೇಡ್ಕರ್ ಮೆಮೊರಿಯಲ್ ಕಲಾ ಮತ್ತು ವಾಣಿಜ್ಯ ಕಾಲೇಜು, ಹುಬ್ಬಳ್ಳಿ |
| | **ಹಾವೇರಿ ಜಿಲ್ಲೆ** |
| 185 | ಗುಡ್ಡಿಯಪ್ಪ ಹಳ್ಳೀಕೇರಿ ಕಾಲೇಜು, ಹಾವೇರಿ |
| 186 | ಮಹಂತಸ್ವಾಮಿ ಕಾಲೇಜು, ಹಂಸಭಾವಿ– 581 109, ಹಿರೇಕೆರೂರು ತಾ: |
| 187 | ಆರ್.ಟಿ.ಇ ಎಜುಕೇಷನ್ ಸೊಸೈಟಿ ರಾಣಿಬೆನ್ನೂರು – 581 115. |
| 188 | ಎಸ್.ಜೆ.ಎಂ.ವಿ.ಬಿ.ಎ.ಜೆ.ಎಸ್.ಎಸ್. ಕಾಲೇಜು, ರಾಣಿಬೆನ್ನೂರು – 581 115. |
| 189 | ಬಿ.ಎ.ಜೆ.ಎಸ್.ಎಸ್. ಕಾಲೇಜು, ಹಲಗೇರಿ ರಸ್ತೆ, ರಾಣಿಬೆನ್ನೂರು – 581 115. |
| 190 | ಶ್ರೀ ಕುಮಾರೇಶ್ವರ ಕಾಲೇಜು, ಹಾನಗಲ್ – 581 104. |
| 191 | ಬಿ.ಇ.ಎಸ್.ಎಂ. ವರ್ತಕರ ಕಲಾ ಮತ್ತು ವಾಣಿಜ್ಯ ಕಾಲೇಜು, ಬ್ಯಾಡಗಿ– 581 106. |
| 192 | ಶ್ರೀ ರಂಭಾಪುರಿ ಜಗದ್ಗುರು ವೀರ ಗಂಗಾಧರ ಕಾಲೇಜು, ಶಿಗ್ಗಾಂವ– 581 205. |
| 193 | ಪ್ರಿಯದರ್ಶಿನಿ ಡಿಗ್ರಿ ಕಾಲೇಜು, ರಾತಿಹಳ್ಳಿ, ಹಿರೇಕೆರೂರು |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 194 | **ಗದಗ ಜಿಲ್ಲೆ** |
| | ಜಗದ್ಗುರು ತೋಂಟದಾರ್ಯ ಕಾಲೇಜು, ಬೆಟಗೇರಿ – 582 101, ಗದಗ್ ತಾ: |
| 195 | ಶ್ರೀ ಅನ್ನದಾನೇಶ್ವರ ಕಾಲೇಜು, ನರೇಗಲ್– 582 116 (ರೋಣ ತಾ:) |
| 196 | ಮುನ್‌ಸಿಪಲ್ ಕಲಾ ಕಾಲೇಜು, ಲಕ್ಷ್ಮೇಶ್ವರ್ – 582 116, (ಶಿರಹಟ್ಟಿ ತಾ:) |
| 197 | ಎ.ಎಸ್.ಎಸ್ ಎಜುಕೇಶನ್ ಕಾಲೇಜು, ಗದಗ–592101 |
| 198 | ಶ್ರೀ ಜಗದ್ಗುರು ಅನ್ನದಾನೀಶ್ವರ ಶಿಕ್ಷಣ ಮಹಾವಿದ್ಯಾಲಯ, ಬ್ಯಾಡವಾಡಗಿ ರಸ್ತೆ, (ಎಸ್.ಜೆ.ಎ.ವಿ ಕಮಿಟಿ ಕಾಲೇಜು), ಮುಂಡರಗಿ–582118 |
| 199 | ಕನಕದಾಸ ಎಜುಕೇಶನ್ ಕಮೀಟಿ ಕಾಲೇಜು, ವಿದ್ಯಾನಗರ, ಗದಗ –582 201 |
| 200 | ಕೆ.ಎಲ್.ಇ ಮಹಿಳಾ ಕಾಲೇಜು, ಗದಗ್, ಬೆಟಗೇರಿ – 582 101. |
| 201 | ಶ್ರೀ ಕಲ್ಲೇಶ್ವರ ವಿದ್ಯಾ ಪ್ರಸಾರಕ ಕಮಿಟಿ ಪ್ರಥಮ ದರ್ಜೆ ಕಾಲೇಜು ಹೊಳೆ ಆಲೂರು–582208(ರೋಣ ತಾ:) |
| 202 | ಪಂಡಿತ ಪಂಚಾಕ್ಷರ ಗವಾಯಿ ಆರ್ಟ್ಸ್ ಕಾಲೇಜು ಗದಗ್ – 582 101. |
| 203 | ಪಂಡಿತ ಪಂಚಾಕ್ಷರ ಗವಾಯಿ ಕಾಲೇಜು(ಮ್ಯುಸೀಕ್) ಗದಗ್ – 582 101. |
| | **ಉತ್ತರ ಕನ್ನಡ ಜಿಲ್ಲೆ** |
| 204 | ಡಾ|| ಎ.ವಿ ಬಾಳಿಗ ಕಲಾ ಮತ್ತು ವಿಜ್ಞಾನ ಕಾಲೇಜು, ಕುಮಟಾ–581 343. |
| 205 | ಡಾ|| ಎ.ವಿ ಬಾಳಿಗ ವಾಣಿಜ್ಯ ಕಾಲೇಜು, ಕುಮಟಾ–581 343. |
| 206 | ಎಂ.ಎಂ. ಕಲಾ ಮತ್ತು ವಿಜ್ಞಾನ ಕಾಲೇಜು, ಸಿರಸಿ–581 402. |
| 207 | ಎಸ್.ಡಿ.ಎಂ ಕಾಲೇಜು, ಹೊನ್ನಾವರ– 581 334. |
| 208 | ಗೋಖಲೆ ಸೆನ್‌ಟಿನರಿ ಕಾಲೇಜು, ಅಂಕೋಲ–581 314. |
| 209 | ಅಂಜುಮಾನ್ ಭಟ್ಕಲ್– 581 320. |
| 210 | ಮಹಾತ್ಮ ಗಾಂಧಿ ಸೆನ್‌ಟಿನರಿ ಕಾಲೇಜು, ಸಿದ್ದಾಪುರ–581 355. |
| 211 | ದಿವೇಕರ್ ವಾಣಿಜ್ಯ ಕಾಲೇಜು, ಕಾರವಾರ– 581 301. |
| 212 | ಶಿವಾಜಿ ಕಲಾ ಮತ್ತು ವಾಣಿಜ್ಯ ಕಾಲೇಜು, ಬಾಡ– 581 304, (ಕಾರವಾರ ತಾಲ್ಲೂಕು) |
| 213 | ಎಂ.ಇ.ಎಸ್ ವಾಣಿಜ್ಯ ಕಾಲೇಜು, ಶಿರಸಿ– 581 402. |
| 214 | ಬನಗೂರ ನಾಗರ ಕಾಲೇಜು, ದಾಂಡೇಲಿ–581325(ಹಳಿಯಾಳ ತಾ:) |
| 215 | ಮಹಾಸತಿ ಕಾಲೇಜು, ಉಲ್ಗ – 581 328, (ಕಾರವಾರ ತಾಲ್ಲೂಕು) |
| 216 | ಬಾಬೂಜಿ ಗ್ರಾಮೀಣ ವಿಕಾಸ ಕಮಿಟಿ ಕಾಲೇಜು, ಸದಾಶಿವಗಡ್ –581352(ಕಾರವಾರ ತಾ:) |
| | **ಬೆಳಗಾವಿ ಜಿಲ್ಲೆ** |
| 217 | ಕೆ.ಎಲ್.ಇ. ಸೊಸೈಟಿ ಲಿಂಗರಾಜ ಕಾಲೇಜು, ಬೆಳಗಾಂ – 590 001 |
| 218 | ರಾಣಿ ಪಾರ್ವತಿ ದೇವಿ ಕಾಲೇಜು, ಬೆಳಗಾಂ – 590 006. |
| 219 | ಗೋಗ್ಟೆ ಕಾಲೇಜು, ತಿಲಕವಾಡಿ, ಬೆಳಗಾಂ – 590 006. |
| 220 | ರಾಜ ಲಖಮ ಗೌಡ ವಿಜ್ಞಾನ ಕಾಲೇಜು, ಬೆಳಗಾಂ – 590 001. |
| 221 | ಜಿ.ಐ ಬಾಗೇವಾಡಿ ಕಾಲೇಜು, ನಿಪ್ಪಣಿ – 591 237(ಚಿಕ್ಕೋಡಿ ತಾ:) |
| 222 | ಗೋವಿಂದ ರಾಮ್ ಸೆಕ್ಸೇರಿಯ ಕಾಲೇಜು, ತಿಲಕವಾಡಿ, ಬೆಳಗಾಂ– 590 006. |
| 223 | ಜೆ.ಎಸ್.ಎಸ್ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜು, ಗೋಕಾಕ್ – 591 307. |
| 224 | ಸಿ.ಎಸ್ ಬೆಂಬಳಗಿ ಕಲಾ .ಎಸ್.ಎಂ.ಆರ್ ಪಾಲಾರೇಖ ವಿಜ್ಞಾನ ಮತ್ತು ಜಿ.ಎಲ್ ರಾಟಿ ವಾಣಿಜ್ಯ ಕಾಲೇಜು, ರಾಮದುರ್ಗ–591123 |
| 225 | ಎಸ್.ಎನ್ ಮತ್ತು ಪಿ.ಪಿ ಕಮಿಟಿ ಕಾಲೇಜು, ಸಾಂಕೇಶ್ವರ–591 313, (ಹುಕ್ಕೇರಿ ತಾಲ್ಲೂಕು) |
| 226 | ಶ್ರೀ ಎಲ್.ಕೆ ಖೋಟ್ ಕಾಲೇಜು, ಸಾಂಕೇಶ್ವರ– 591 313, (ಹುಕ್ಕೇರಿ ತಾಲ್ಲೂಕು) |
| 227 | ಶಿವಾನಂದ ಕಾಲೇಜು ಕಾಗೇವಾಡ– 591 223. (ಅಥಣಿ ತಾಲ್ಲೂಕು) |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 228 | ಎಸ್.ಎಸ್.ಎಸ್.ಎಸ್ ಮಹಾವೀರ ಪಿ ಮಿರ್ಜಿ ಕಾಲೇಜು, ನೆಹರು ನಗರ, ಬೆಳಗಾಂ – 590 010. |
| 229 | ಶ್ರೀ ಎಸ್.ಎಮ್.ಎಸ್ ಕಾಲೇಜು, ಅಥಣಿ– 591 304. |
| 230 | ಕೆ.ಆರ್.ಸಿ.ಇ ಕಾಲೇಜು, ಬೈಲಹೊಂಗಲ – 591 102. |
| 231 | ಬಸವ ಪ್ರಭು ಕೋರೆ ಕಾಲೇಜು, ಚಿಕ್ಕೋಡಿ – 591 201. |
| 232 | ಶ್ರೀಮತಿ ಕುಸುಮಾವತಿ ಮಿರಜಿ ಕಾಲೇಜು,ಬೆಡಕಿಹಾಲ್,ಶಾಮನೇವಾಡಿ,ಚಿಕ್ಕೋಡಿ – 591 214. |
| 233 | ಕೆ.ಎನ್.ವಿ.ವಿ.ಎಸ್. ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯ, ಕಿತ್ತೂರು – 591 115, (ಬೈಲಹೊಂಗಲ ತಾಲ್ಲೂಕು) |
| 234 | ಎಸ್.ಪಿ ಮಂಡಲ್ ಕಲಾ ಮತ್ತು ವಾಣಿಜ್ಯ ಕಾಲೇಜು, ರಾಯ್‌ಬಾಗ್– 591 317. |
| 235 | ಡಿ.ಎಂ.ಎಸ್.ಎಂ.ಬಿ.ಕೆ ಕಾಲೇಜು, ಜ್ಯೋತಿ ಕಾಂಪೌಂಡ್, ಕ್ಲಬ್ ರಸ್ತೆ, ಬೆಳಗಾಂ–590001 |
| 236 | ಕೆ.ಎಲ್.ಇ ಸೊಸೈಟಿ ಎಸ್.ವಿ.ಎಸ್ ಬೆಳ್ಳುಬ್ಬಿ ಕಾಲೇಜು, ಸೌದತ್ತಿ – 591 126. |
| 237 | ಮರಾಠ ಮಂಡಲ್ ಕಲಾ ಮತ್ತು ವಾಣಿಜ್ಯ ಕಾಲೇಜು ,ರಾಜ ಟೈಲಸ್ ಪ್ಯಾಕ್ಟರಿ ಹತ್ತಿರ, ಬೆಳಗಾಂ ಗೋವಾ ರಸ್ತೆ, ಖಾನಾಪುರ–591302 |
| 238 | ಎಸ್.ಎಸ್.ಎನ್ ಕಲಾ ಮತ್ತು ವಾಣಿಜ್ಯ ಕಾಲೇಜು, ಹುಕ್ಕೇರಿ – 591 309. |
| 239 | ಅಂಜುಮಾನ್ ಕಾಲೇಜು, ಅಜಾಂ ನಗರ, ಬೆಳಗಾಂ– 590 010. |
| 240 | ಮುದಲಗಿ ಎಜುಕಾಶನ್ ಸೊಸೈಟಿ ಕಾಲೇಜು ಮೂಡಲಗಿ –591 312 |
| 241 | ಎಸ್.ವಿ.ಎಜುಕೇಷನ್ ಸೊಸೈಟಿ ಕಾಲೇಜು, ಹಾರುಗೇರಿ– 591 220 |
| 242 | ಮರಾಠ ಮಂಡಲ್ ಕಲಾ ,ವಾಣಿಜ್ಯ,ವಿಜ್ಞಾನ ಮತ್ತು ಗೃಹ ವಿಜ್ಞಾನ ಕಾಲೇಜು,ಬಿ.ಸಿ.ನಂ.15, ಕೋಟೆ,ಬೆಳಗಾಂ –560 016 |
| 243 | ಶ್ರೀಮತಿ ಅಹಲ್ಯ ಬಾಯಿ ಎ ಪಾಟೀಲ್ ಮಹಿಳಾ ಕಾಲೇಜು , ಚಿಕ್ಕೋಡಿ–581 201. |
| 244 | ಬಿ ಶಂಕರಾನಂದ ಕಲಾ ಕಾಲೇಜು, ಕುಡಚಿ, ಬೆಳಗಾಂ |
| 245 | ವಿಶ್ವ ಭಾರತಿ ಪ್ರಥಮ ದರ್ಜೆ ಕಾಲೇಜು, ತುರನೂರು, ರಾಮದುರ್ಗ ತಾ. |
| 246 | ಶ್ರೀ ಶಂಕರಾನಂದ ರಾಷ್ಟ್ರೀಯ ಕಲಾ ಮಹಾವಿದ್ಯಾಲಯ, ಘಟಪ್ರಭಾ |
| | **ಬಾಗಲಕೋಟೆ ಜಿಲ್ಲೆ** |
| 247 | ಬಸವೇಶ್ವರ ಕಲಾ ಕಾಲೇಜು, ಬಾಗಲಕೋಟೆ – 587 101 |
| 248 | ಬಿ.ಎಲ್.ಡಿ.ಇ ಸಂಸ್ಥೆಯ ಜಿ.ಹೆಚ್.ಎಸ್ ಮತ್ತು ಟಿ.ಜಿ.ಪಿ ಕಾಲೇಜು, ಜಮಖಂಡಿ–587302 |
| 249 | ಶ್ರೀ ವಿಜಯ ಮಹಾಂತೇಶ್ ಕಾಲೇಜು ಇಳಕಲ್ – 587 125(ಹುನಗುಂದ ತಾ:) |
| 250 | ಬಸವೇಶ್ವರ ವಿಜ್ಞಾನ ಕಾಲೇಜು, ಬಾಗಲಕೋಟೆ – 587 101 |
| 251 | ವಿಜಯ ಮಹಾಂತೇಶ್ ಕೃಪಾಪೋಶಿತ ಎಸ್.ಆರ್ ವಸ್ತ್ರದ್ ಕಾಲೇಜು, ಹುನಗುಂದ–587118. |
| 252 | ಎಸ್.ಎಂ ಭಂಡಾರಿ ಕಾಲೇಜು, ಗುಳ್ಳೇದಗುಡ್ಡ–587203(ಬಾದಾಮಿ ತಾ:) |
| 253 | ಬಸವೇಶ್ವರ ವಾಣಿಜ್ಯ ಕಾಲೇಜು, ಬಾಗಲಕೋಟೆ – 587 101 |
| 254 | ಜೆ.ಎಸ್.ಟ್ರಸ್ಟ್ ಶ್ರೀ ತಮ್ಮಣ್ಣಪ್ಪ ಕಾಲೇಜು, ಬನಹಟ್ಟಿ–587311 (ಜಮಖಂಡಿ ತಾ:) |
| 255 | ಶ್ರೀ ವೀರಪುಲಕೇಶಿ ಕಾಲೇಜು, ಬಾದಾಮಿ – 587201. |
| 256 | ಶ್ರೀ ಎಸ್.ಆರ್ ಕಾಂತಿ ಕಾಲೇಜು, ಮುದೋಳ – 587313. |
| 257 | ಶ್ರೀ ಎಸ್.ಆರ್ ನರಸಾಪುರ ಕಲಾ ಮತ್ತು ಶ್ರೀ ಎಂ.ಬಿ ಶಿರೋರ ವಾಣಿಜ್ಯ ಕಾಲೇಜು ಬಾಗಲಕೋಟೆ–587101 |
| 258 | ಎಸ್,ಸಿ.ಪಿ ಕಲಾ ಮತ್ತು ಡಿ.ಡಿ.ಶಿರೋಳ ಕಾಲೇಜು, ಮಹಾಲಿಂಗಪುರ–587312 (ಮುಧೋಳ ತಾ:) |
| | **ವಿಜಯಪುರ ಜಿಲ್ಲೆ** |
| 259 | ಎಸ್.ಬಿ ಕಲಾ ಮತು ಕೆ.ಸಿ.ಪಿ ಕಾಲೇಜು.ವಿಜಯಪುರ – 586 103. |
| 260 | ಎ.ಎಸ್.ಪಾಟೀಲ್ ಕಾಲೇಜು. ಶೋರಾಪುರ ರಸ್ತೆ, ವಿಜಯಪುರ – 586 103. |
| 261 | ಮಾತೃಶ್ರೀ ಗಂಗಮ್ಮ ವೀರಪ್ಪ ಚನ್ನವೀರ ಕಾಲೇಜು, ಮುದ್ದೇಬಿಹಾಳ– 586 212. |
| 262 | ನ್ಯೂ ಆರ್ಟ್ಸ್ ಕಾಲೇಜು. ವಿಜಯಪುರ – 586103 |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 263 | ಅಂಜುಮಾನ್ ಕಾಲೇಜು, ವಿಜಯಪುರ-586 104 |
| 264 | ಜಿ.ಪಿ ಪೋರ್‌ವಾಲ ಕಲಾ, ವಾಣಿಜ್ಯ ಮತ್ತು ವಿ.ವಿ.ಶಾಲಿಮಠ್ ವಿಜ್ಞಾನ ಕಾಲೇಜು, ಸಿಂದಗಿ. - 586 128. |
| 265 | ಶ್ರೀ ಸಂಗಮೇಶ್ವರ ಕಾಲೇಜು ಚಡ್‌ಚಣ್- 586 205 ಇಂಡಿ ತಾ. |
| 266 | ಸೀಕಾಬ್ ಸಂಸ್ಥೆಯ ಎ.ಆರ್.ಎಸ್ ಇನಾಂದಾರ್ ಕಾಲೇಜು, 12, ನೌಬಾಗ್ ವಿಜಯಪುರ -586 101 |
| 267 | ಶ್ರೀ ಖಸ್ಗಟೇಶ ಕಾಲೇಜು ತಾಳಿಕೋಟೆ- 586 214 (ಮುದ್ದೇಬಿಹಾಳ ತಾ:) |
| 268 | ಶ್ರೀ ಜಿ.ಆರ್ ಗಾಂಧಿ ಮತ್ತು ಶ್ರೀ ವಿ.ಎ ಪಾಟೀಲ್ ಕಾಲೇಜು. ಇಂಡಿ - 586 209 |
| 269 | ಬಸವೇಶ್ವರ ಕಾಲೇಜು, ಬಸವನ ಬಾಗೇವಾಡಿ - 586 203. |
| 270 | ಬಿ.ಎಲ್.ಡಿ.ಇ ಅಸೋಸಿಯಶನ್ಸ್ ಎಸ್.ಬಿ. ಕಲಾ & ಕೆ.ಸಿ.ಪಿ. ವಿಜ್ಞಾನ ಕಾಲೇಜು, ವಿಜಯಪುರ - 586 101. |
| 271 | ಬಿ.ಸಿ.ಪಿ.ಎಸ್ ಮಂಡಳಿಯ ನ್ಯೂ ಕಲಾ ಕಾಲೇಜು, ಸಿಂದಗಿ - 586 128. |
| 272 | ಗ್ರಾಮತಾರಾ ವಿದ್ಯಾವರ್ಧಕ ಟ್ರಸ್ಟ್ ಶ್ರೀ ಶಾಂತವೀರ ಕಾಲೇಜು, ಬಬಲೇಶ್ವರ - 580113 ವಿಜಯಪುರ ತಾ. |
| 273 | ಶ್ರೀ ಜಗದಂಬಾ ಪ್ರಥಮ ದರ್ಜೆ ಕಲಾ ಮತ್ತು ವಿಜ್ಞಾನ ಕಾಲೇಜು, ಹಿತ್ನಳ್ಳಿ ತಾಂಡ |
| | **ಗುಲ್ಬರ್ಗಾ ವಿಶ್ವವಿದ್ಯಾಲಯ ವ್ಯಾಪ್ತಿಗೊಳಪಡುವ ಕಾಲೇಜುಗಳು** |
| | **ಗುಲ್ಬರ್ಗಾ ಜಿಲ್ಲೆ** |
| 274 | ಶರಣ ಬಸವೇಶ್ವರ ಕಲಾ ಕಾಲೇಜು, ಗುಲ್ಬರ್ಗಾ - 585 103. |
| 275 | ಶರಣ ಬಸವೇಶ್ವರ ವಿಜ್ಞಾನ ಕಾಲೇಜು, ಗುಲ್ಬರ್ಗಾ - 585 103. |
| 276 | ಶರಣ ಬಸವೇಶ್ವರ ವಾಣಿಜ್ಯ ಕಾಲೇಜು, ಗುಲ್ಬರ್ಗಾ - 585 103. |
| 277 | ಶ್ರೀಮತಿ ವಿ.ಜಿ ಮಹಿಳಾ ಕಾಲೇಜು, ಗುಲ್ಬರ್ಗಾ- 585 102. |
| 278 | ಎಂ.ಎಸ್ ಇರಾನಿ ಕಾಲೇಜು, ಗುಲ್ಬರ್ಗಾ- 585 102. |
| 279 | ಎಸ್.ಎಸ್. ಮುರಗೋಳ್ ಕಾಲೇಜು ಷಹಾಬಾದ್- 585 228 (ಚಿತ್ತಾಪುರ ತಾಲ್ಲೂಕು) |
| 280 | ಗೋದೂ ತಾಯಿ ದೊಡ್ಡಪ್ಪ ಅಪ್ಪ ಮಹಿಳಾ ಕಾಲೇಜು, ಗುಲ್ಬರ್ಗಾ - 585 103. |
| 281 | ಕೆ.ಇ.ಎಸ್ ಬೀಬಿ ರಾಜಾ ಮಹಿಳಾ ಕಾಲೇಜು, ರೌಜ ಬುಜುರ್ಗ, ಗುಲ್ಬರ್ಗಾ- 585104. |
| 282 | ಹೆಚ್.ಕೆ.ಇ.ಎಸ್ ಕಾಲೇಜು, ವಿದ್ಯಾನಗರ, ಆಳಂದ್ - 585 802. |
| 283 | ಡಾ॥ ಬಿ.ಆಂಬೇಡ್ಕರ್ ಕಾಲೇಜು, ದರ್ಗಾ ರಸ್ತೆ, ಗುಲ್ಬರ್ಗಾ- 585 101. |
| 284 | ಎನ್.ವಿ.ಎಸ್. ಎನ್.ವಿ ಕಲಾ, ಶ್ರೀ ಕನ್ನಯ್ಯಲಾಲ್ ಮಾಲ ವಿಜ್ಞಾನ ಮತ್ತು ಡಾ:ಪಾಂಡುರಂಗರಾವ್ ವೈಷ್ಣ ವಾಣಿಜ್ಯ ಕಾಲೇಜು, ಗುಲ್ಬರ್ಗಾ-585103 |
| 285 | ಹೆಚ್.ಕೆ.ಇ ಸೊಸೈಟಿ ಶ್ರೀಮತಿ ಚನ್ನಮ್ಮ ಬಸಪ್ಪ ಪಾಟೀಲ್ ಕಾಲೇಜು ಚಿಂಚೋಳಿ- 585 307. |
| 286 | ನೃಪತುಂಗ ಕಲಾ ಮತ್ತು ವಾಣಿಜ್ಯ ಕಾಲೇಜು, ಸೇಡಂ - 585 222. |
| 287 | ಮಹಾತ್ಮ ಜ್ಯೋತಿ ಬಾಪೂಲೆ ಡಿಗ್ರಿ ಕಾಲೇಜು, ಗುಲ್ಬರ್ಗಾ |
| 288 | ಕರ್ನಾಟಕ ಪದವಿ ಕಾಲೇಜು, ಬಂಕೂರು, ಗುಲ್ಬರ್ಗಾ ಜಿಲ್ಲೆ |
| | **ಯಾದಗಿರಿ ಜಿಲ್ಲೆ** |
| 289 | ಶ್ರೀ ಪ್ರಭು ಕಾಲೇಜು, ಶೋರಾಪುರ-585 224. |
| 290 | ಡಾ: ಅಂಬೇಡ್ಕರ್ ಪ್ರಥಮ ದರ್ಜೆ ಕಲಾ ಕಾಲೇಜು, ರಂಗಂಪೇಟೆ, ಸುರಪುರ |
| | **ರಾಯಚೂರು ಜಿಲ್ಲೆ** |
| 291 | ಲಕ್ಷ್ಮಿ ವೆಂಕಟೇಶ ದೇಸಾಯಿ ಕಾಲೇಜು, ರಾಯಚೂರು - 584 101. |
| 292 | ಬಂಕತ್ ಲಾಲಾ ರಾಜ ರಾಂಬೂಬ ಕಾಲೇಜು, ರಾಯಚೂರು - 584 101. |
| 293 | ಸೋಮ ಸುಬದ್ರಮ್ಮ ರಮಣ ಗೌಡ ಮಹಿಳಾ ಕಾಲೇಜು, ಸ್ಟೇಶನ್ ರಸ್ತೆ, ರಾಯಚೂರು - 584 101. |
| 294 | ಠಾಗೋರ್ ಮೆಮೋರಿಯಲ್ ಎಜುಕೇಶನ್ ಕಮಿಟಿ ಸೀತಾ ಸುಬ್ಬರಾಜು ಮೆಮೋರಿಯಲ್ ಕಾಲೇಜು. ರಾಯಚೂರು-584101 |

| ಕ್ರ ಸಂ | ಕಾಲೇಜುಗಳ ಹೆಸರು ಮತ್ತು ವಿಳಾಸ |
|---|---|
| 295 | ಶ್ರೀ ವಲಬಳ್ಳಾರಿ ಚನ್ನ ಬಸವೇಶ್ವರ ಎಜುಕೇಶನ್ ಸೊಸೈಟಿ ಕಾಲೇಜು, ಲಿಂಗಸೂಗೂರು--584 122. |
| | **ಕೊಪ್ಪಳ ಜಿಲ್ಲೆ** |
| 296 | ಶ್ರೀ ಗವಿಸಿದ್ಧೇಶ್ವರ ಕಾಳೇಜು, ಕೊಪ್ಪಳ – 583 231. |
| 297 | ಶ್ರೀ. ಹೆಚ್. ಆರ್.ಶ್ರೀರಾಮುಲು ಮೆಮೋರಿಯಲ್ ಕಾಲೇಜು, ಗಂಗಾವತಿ – 583 227. |
| 298 | ಗುಂಜಹಳ್ಳಿ ಹಿರೇನಾಗಪ್ಪ ವಾಣಿಜ್ಯ ಕಾಲೇಜು, ಗಂಗಾವತಿ – 583 227. |
| | **ಬಳ್ಳಾರಿ ಜಿಲ್ಲೆ** |
| 299 | ವೀರಶೈವ ಕಾಲೇಜು ಕಾಲೇಜು,. ಬಳ್ಳಾರಿ – 583 104. |
| 300 | ವಿಜಯನಗರ ಕಾಲೇಜು, ಹೊಸಪೇಟೆ – 583 201. |
| 301 | ಶ್ರೀಮತಿ ಅಲ್ಲಮ್ಮ ಸುಮಂಗಲಮ್ಮ ಮೆಮೋರಿಯಲ್ ಮಹಿಳಾ ಕಾಲೇಜು, ಗಾಂಧಿನಗರ, ಬಳ್ಳಾರಿ – 583 103. |
| 302 | ಕೊಟ್ಟೂರೇಶ್ವರ ಕಾಲೇಜು, ಕೊಟ್ಟೂರು – 583 134, (ಕೂಡ್ಲಿಗಿ ತಾ) |
| 303 | ಗಂಗಾವತಿ ಭಾಗ್ಯಮ್ಮ ಗ್ರಾಮೀಣ ಕಾಲೇಜು, ಹೂವಿನಹಡಗಲಿ – 583 219. |
| 304 | ಥಿಯೋಸೋಫಿಕಲ್ ಮಹಿಳಾ ಪ್ರಥಮ ದರ್ಜೆ ಕಾಲೇಜು, ಹಂಪಿ ರಸ್ತೆ, ಹೊಸಪೇಟೆ – 583 201. |
| 305 | ಹಂಪಿ ವೀರುಪಾಕ್ಷ ಪ್ರಥಮ ದರ್ಜೆ ಕಾಲೇಜು, ಬಳ್ಳಾರಿ |
| 306 | ಎಸ್.ಇ.ಎಸ್. ಕಾಲೇಜು, ಸಂಡೂರು – 583 119. |
| | **ಬೀದರ್ ಜಿಲ್ಲೆ** |
| 307 | ಬಿ.ವಿ ಭೂಮಾ ರೆಡ್ಡಿ ಕಾಲೇಜು, ಬೀದರ್ – 585 403. |
| 308 | ಎಸ್.ಎಸ್.ಖೂಬ ಬಸವೇಶ್ವರ ಕಾಲೇಜು, ಬಸವಕಲ್ಯಾಣ – 855 327. |
| 309 | ಚನ್ನ ಬಸವೇಶ್ವರ ಕಾಲೇಜು, ಭಾಲ್ಕಿ – 585 328. |
| 310 | ಕರ್ನಾಟಕ ಕಾಲೇಜು ಬೀದರ್ – 585 401. |
| 311 | ಅಕ್ಕಮಹಾದೇವಿ ಕಾಲೇಜು, ಬೀದರ್ – 585 401. |
| 312 | ಅಮರೇಶ್ವರ ಕಾಲೇಜು, ಔರಾದ್– 585 326. |
| 313 | ಶ್ರೀ ಬಸವತೀರ್ಥ ಚನ್ನ ಬಸವ ಸ್ವಾಮೀಜಿ ಮತ್ತು ಶ್ರೀ ವೀರ ಭದ್ರೇಶ್ವರ ಕಾಲೇಜು, ಹುಮ್ನಾಬಾದ್ – 585 330. |
| 314 | ಮೆಥಡಿಸ್ಟ್ ಕಾಲೇಜು, ಬೀದರ್– 585 401. |
| 315 | ಶ್ರೀ ಸಿದ್ಧರಾಮೇಶ್ವರ ಕಾಲೇಜು, ಕಮಲಾನಗರ – 585 417, |
| 316 | ಡಾ॥ ಬಿ.ಆರ್ ಅಂಬೇಡ್ಕರ್ ಪ್ರಥಮ ದರ್ಜೆ ಕಾಲೇಜು, ಹಳ್ಳಿಖೇಡ್, ಹುಮ್ನಾಬಾದ್ ತಾಲ್ಲೂಕು – 585 414. |
| 317 | ರಾಜೀವ್ ಗಾಂಧಿ ಪ್ರಥಮ ದರ್ಜೆ ಕಾಲೇಜು, ಬಸವಕಲ್ಯಾಣ |
| 318 | ಸಿದ್ದಾರ್ಥ ಕಲಾ ಮತ್ತು ವಾಣಿಜ್ಯ ಕಾಲೇಜು, ಬೀದರ್ |
| 319 | ಕವಿರತ್ನ ಕಾಳಿದಾಸ ಕಲಾ ಕಾಲೇಜು, ಬೀದರ್ |
| 320 | ಸಿ.ಇ.ಎಸ್ ಕಲಾ ಮತ್ತು ವಾಣಿಜ್ಯ ಡಿಗ್ರಿ ಕಾಲೇಜು, ಮುನಾಯ್ಕೆಹಳ್ಳಿ, ಹುಮ್ನಾಬಾದ, ಬೀದರ್ |
| 321 | ಡಾ॥ ಬಿ.ಆರ್ ಅಂಬೇಡ್ಕರ್ ಪ್ರಥಮ ದರ್ಜೆ ಕಾಲೇಜು, ಬೀದರ್ |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 722

ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)

ಉತ್ತರಿಸುವವರು : ಮಾನ್ಯ ಮುಖ್ಯಮಂತ್ರಿಗಳು

ಉತ್ತರಿಸಬೇಕಾದ ದಿನಾಂಕ : 12.02.2019

| ಕ್ರ.ಸಂ. | ಪ್ರಶ್ನೆಗಳು | ಉತ್ತರ |
|---|---|---|
| ಅ | ಸರ್ಕಾರವು ಮಾರ್ಚ್ 2012 ರಿಂದಲೇ ರೋಗಗ್ರಸ್ತ ಉದ್ದಿಮೆ ಎಂದು ಘೋಷಿಸಿರುವ ಮೈಸೂರು ಪೇಪರ್ ಮಿಲ್ ಸಂಸ್ಥೆಯು ನವೆಂಬರ್ 2015 ರಿಂದ ಕಾರ್ಯ ಚಟುವಟಿಕೆಯನ್ನು ಸ್ಥಗಿತಗೊಳಿಸಿದ್ದು, ಮಾರ್ಚ್ 2018ರ ವರೆಗೆ ಅನುಭವಿಸಿರುವ ಸಂಚಿತ ನಷ್ಟ ಎಷ್ಟು;(ವಿವರಗಳನ್ನು ನೀಡುವುದು) | ಮೈಸೂರು ಕಾಗದ ಕಾರ್ಖಾನೆಯು ದಿನಾಂಕ: 31.03.2018 ರವರಗೆ ಅನುಭವಿಸಿರುವ ಸಂಚಿತ ನಷ್ಟವು ರೂ.1094 ಕೋಟಿ (Provisional) ಆಗಿರುತ್ತದೆ ಹಾಗೂ ಆಡಿಟ್ ಇನ್ನು ಕೈಗೊಳ್ಳಬೇಕಾಗಿದೆ.<br>• ಕಾರ್ಖಾನೆಯು ತನ್ನ ಎಲ್ಲಾ ಕಾರ್ಯಚಟುವಟಿಗಳನ್ನು ನವೆಂಬರ್ 2015 ರಿಂದ ಸ್ಥಗಿತಗೊಳಿಸಿದೆ ಹಾಗೂ ಕರ್ನಾಟಕ ಸರ್ಕಾರದ ಆದೇಶದ ಪ್ರಕಾರ ಕಾರ್ಖಾನೆಯ ಕಾರ್ಯಚಟುವಟಿಕೆಯನ್ನು ಗುತ್ತಿಗೆ ಆಧಾರದ ಮೇಲೆ ನೀಡಲು ನಿರ್ದೇಶಿಸಿದೆ.<br>• ಕಾರ್ಖಾನೆಯು ನವೆಂಬರ್ 2015 ರಿಂದ ಸ್ಥಗಿತಗೊಂಡನಂತರ ಕಾರ್ಯಾಚರಣೆಯನ್ನು ತನ್ನ ಕಾಗದದ ಸ್ಟಾಕ್ ಮಾರಾಟ ಮತ್ತು ಸರ್ಕಾರ ನೀಡಿರುವ ಅಸ್ತಿತ್ವದ ಸಾಲದಿಂದ ನಿರ್ವಹಿಸಲಾಗುತ್ತಿದೆ.<br>• ಕಾರ್ಖಾನೆಯು ತನ್ನ ಉದ್ಯೋಗಿಗಳಿಗೆ ಸ್ವಯಂ ನಿವೃತ್ತ ಯೋಜನೆ / ಸ್ವಯಂ ಪ್ರತ್ಯೇಕೀಕರಣ ಯೋಜನೆಯನ್ನು ಜಾರಿಗೊಳಿಸಿದೆ. ಇದರ ಸಲುವಾಗಿ ಸರ್ಕಾರವು ರೂ.345 ಕೋಟಿ ಸಾಲವನ್ನು ಕಾರ್ಖಾನೆಯ ಕಾರ್ಮಿಕರ ಬಾಕಿ ಹಾಗೂ ವಿ.ಆರ್.ಎಸ್./ವಿ.ಎಸ್.ಎಸ್. ಮೊತ್ತವನ್ನು ಪಾವತಿಸಲು ಜಾರಿಗೊಳಿಸಿರುತ್ತದೆ. ಅದರ ಮೇಲಿನ ಬಡ್ಡಿಯೂ ಸಹ ಕಂಪನಿಗೆ ನಷ್ಟವೇ ಆಗಿರುತ್ತದೆ.<br>• ಕಾರ್ಖಾನೆಯ ಕಾರ್ಯಾಚರಣೆಯನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರದಲ್ಲಿ ನೀಡಲು ಸರ್ಕಾರವು ತೀರ್ಮಾನಿಸಿರುತ್ತದೆ. |
| ಆ | ಈ ಸಂಸ್ಥೆಯನ್ನು ರೋಗಗ್ರಸ್ತ ಎಂದು ಪರಿಗಣಿಸಿದ ದಿನಾಂಕದಿಂದ ಸಂಸ್ಥೆಯ ಪುನಶ್ಚೇತನಕ್ಕಾಗಿ ಈವರೆಗೆ ಸರ್ಕಾರವು ಸಾಲ/ಅನುದಾನ ಮತ್ತು ಮುಂಗಡದ ರೂಪದಲ್ಲಿ ನೀಡಿರುವ ಸಹಾಯ ಧನವೆಷ್ಟು; | ಅನುಬಂಧ – 1 ರಲ್ಲಿ ನೀಡಲಾಗಿದೆ. |

| ಇ | ಸಾಲ/ಅನುದಾನ/ಸಹಾಯಧನದ ನಿಯಮ ಮತ್ತು ಕರಾರುಗಳನ್ನು ಅಂತಿಮಗೊಳಿಸಲಾಗಿದೆಯೇ; ಇಲ್ಲದಿದ್ದಲ್ಲಿ, ಕಾರಣವೇನು; | ಮೈಸೂರು ಕಾಗದ ಕಾರ್ಖಾನೆಗೆ ಸಾಲ/ಅನುದಾನ/ ಸಹಾಯಧನದ ಬಗ್ಗೆ ಕೆಲವು ಷರತ್ತು ಮತ್ತು ನಿಬಂಧನೆಗಳನ್ನು ಸಲ್ಲಿಸಲಾಗಿದ್ದು ಬಾಕಿ ಉಳಿದ ಸಾಲ/ಅನುದಾನಗಳನ್ನು ಹಂತಹಂತವಾಗಿ ಅಂತಿಮಗೊಳಿಸಲಾಗುವುದು. |
|---|---|---|
| ಈ | ಈ ಸಂಸ್ಥೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ತಾತ್ಕಾಲಿಕ/ ಖಾಯಂ ನೌಕರರಿಗೆ ಬಾಕಿ ಇರುವ ವೇತನ ಹಾಗೂ ಭತ್ಯೆಗಳನ್ನು ನೀಡಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಬಾಕಿ ಇರುವ ವೇತನವನ್ನು ಇತ್ಯರ್ಥಪಡಿಸಲು ಕೈಗೊಂಡಿರುವ ಕ್ರಮಗಳೇನು; | ಕಂಪನಿಯ ವಿವಿಧ ವರ್ಗಗಳ ಉದ್ಯೋಗಿಗಳಿಗೆ ಏಪ್ರಿಲ್ 2018 ರಿಂದ ಈವರೆಗೂ ಪಾವತಿಸಬೇಕಾಗಿರುವ ವೇತನ ಹಾಗೂ ಭತ್ಯೆಗಳನ್ನು ಎಂ.ಪಿ.ಎಂ. ಅರಣ್ಯ ಪ್ರದೇಶದ ವ್ಯಾಪ್ತಿಯಲ್ಲಿ ಬೆಳೆದಿರುವ ನೆಡುತೋಪಿನ ಕಟಾವಿನ ಮೂಲಕ ಸಂಗ್ರಹವಾಗುವ ಮೊತ್ತದಿಂದ ಉದ್ಯೋಗಿಗಳಿಗೆ ವೇತನ ಮತ್ತು ಸಂಬಳವನ್ನು ವಿತರಿಸಲು ಕ್ರಮ ಕೈಗೊಳ್ಳಲಾಗುತ್ತಿದೆ. |
| ಉ | ಸಂಸ್ಥೆಯು ಕಾರ್ಯ ಚಟುವಟಿಕೆಯನ್ನು ಸ್ಥಗಿತಗೊಳಿಸಿರುವುದರಿಂದ ಕಾರ್ಖಾನೆಯ ಯಂತ್ರೋಪಕರಣ ಮತ್ತು ತಾಂತ್ರಿಕ ಉಪಕರಣಗಳು ಅನುಪಯುಕ್ತವಾಗಿ ಹಾಳಾಗದಂತೆ ಸಂರಕ್ಷಿಸಿಡಲು ಕೈಗೊಂಡಿರುವ ಕ್ರಮಗಳೇನು; | ಎಂ.ಪಿ.ಎಂ. ಆಡಳಿತ ಮಂಡಳಿ ದಿನಾಂಕ 22.04.2017ರಂದು ಜರುಗಿದ ತನ್ನ 555ನೇ ಆಡಳಿತ ಮಂಡಳಿ ಸಭೆಯ ತೀರ್ಮಾನದಂತೆ ಕಾರ್ಖಾನೆಯನ್ನು ಖಾಸಗಿಯವರಿಗೆ ಗುತ್ತಿಗೆ ಆಧಾರಕ್ಕೆ ನೀಡುವವರೆಗೂ ಕಾರ್ಖಾನೆಯ ಯಂತ್ರಗಳನ್ನು ಸುಸ್ಥಿತಿಯಲ್ಲಿಡಲು ನಿರ್ದೇಶಿಸಲಾಗಿದೆ.<br>ಅದರಂತೆಯೇ ಪ್ರತಿ ತಿಂಗಳಲ್ಲಿ ಒಂದು ಅಥವಾ ಎರಡು ಬಾರಿ ತಿರುಗಲ್ಪಡುವ ಯಂತ್ರಗಳನ್ನು ಟ್ರಯಲ್ ರನ್ ಮಾಡಲಾಗುವುದು ಮತ್ತು ನೀರಿನೊಂದಿಗೆ ಅಥವಾ ನೀರಿಲ್ಲದೆಯೂ ಟ್ರಯಲ್ ರನ್ ಮಾಡುವ ಮೂಲಕ ಯಂತ್ರಗಳನ್ನು ಸುಸ್ಥಿತಿಯಲ್ಲಿಡಲು ಕ್ರಮವಹಿಸಲಾಗಿದೆ. ಈ ರೀತಿಯ ಟ್ರಯಲ್ ರನ್ ಮಾಡುವ ಸಂದರ್ಭದಲ್ಲಿ ಎಲ್ಲಾ ವಿದ್ಯುತ್ ಮತ್ತು ಸಂಬಂಧಪಟ್ಟ ಪರಿಕರಗಳು, ಪ್ಯಾನೆಲ್‌ಗಳು ಕಂಟ್ರೋಲ್‌ಗಳ ಕಾರ್ಯಕ್ಷಮತೆಯನ್ನು ಪರೀಕ್ಷಿಸಲಾಗುವುದು. ಯಂತ್ರಗಳ ಟ್ರಯಲ್ ರನ್ ಸಂದರ್ಭದಲ್ಲಿ ಸಮರ್ಪಕ ಕೀಲೆಣ್ಣೆಯನ್ನು ಬಳಸಿ ಯಂತ್ರಗಳ ಉತ್ತಮ ಕಾರ್ಯಕ್ಷಮತೆಯನ್ನು ಕಾಪಾಡಲಾಗುವುದು. ಮುಂದುವರಿದು, ಕಾರ್ಖಾನೆಯ ಗಿರಣಿಗಳ ಸುತ್ತಮುತ್ತಲ ಪರಿಸರವನ್ನು ನಾಜೂಕಾಗಿ ಇಡಲಾಗುವುದು, ಸಾಮಗ್ರಿ ಮತ್ತು ದಾಸ್ತಾನು ಗೋದಾಮುಗಳ ಸುತ್ತಮುತ್ತಲ ಪ್ರದೇಶಗಳನ್ನು ಗಿಡಗಂಟೆಗಳು ಬೆಳೆಯದೇ ಇರುವ ಹಾಗೆ ನೋಡಿಕೊಳ್ಳಲಾಗುತ್ತಿದೆ. |
| ಊ | ಸದರಿ ಸಂಸ್ಥೆಯನ್ನು ಖಾಸಗಿ ಸಹಭಾಗಿತ್ವ ಯೋಜನೆಯಡಿ ಪುನಶ್ಚೇತನಗೊಳಿಸಲು ಸರ್ಕಾರವು ಕಾಲಮಿತಿ ಯೋಜನೆಯನ್ನು ಹಮ್ಮಿಕೊಂಡಿರುವುದೇ; ಹಾಗಿದ್ದಲ್ಲಿ, ಪ್ರಸ್ತುತ ಹಂತವೇನು? | ಕರ್ನಾಟಕ ಸರ್ಕಾರದ ಆದೇಶ ಸಂ:ಸಿಐ 127 ಸಿಪಿಎಂ 2015 (ಪಿ), ದಿ.04.01.2017 ರ ಪ್ರಕಾರ ಮೈ.ಕಾ.ಕಾ.ನೆಯು ದಿ.18.04.2017 ರಂದು ಕರ್ನಾಟಕ ಸರ್ಕಾರದ ಇ-ಪೋರ್ಟಲ್ ನಲ್ಲಿ ರಿಕ್ವೆಸ್ಟ್ ಫಾರ್ ಕ್ವಾಲಿಫಿಕೇಷನ್ (RFQ) ಅಪ್‌ಲೋಡ್ ಮಾಡಲಾಗಿತ್ತು. 30.05.2017 ರಂದು ಪೂರ್ವಭಾವಿ ಸಭೆ ಕರೆಯಲಾಯಿತು ಅದರಲ್ಲಿ 5 ಕಂಪನಿಗಳು ಭಾಗವಹಿಸಿದ್ದರು. ಬಿಡ್ದುದಾರರು |

...3

| | | ಅವರು ಕೇಳಿರುವ ಪಶ್ನೆಗಳ ಪ್ರತಿಕ್ರಿಯೆಯನ್ನು ಇ-ಪೋರ್ಟಲ್‌ನಲ್ಲಿ ಅಪ್‌ಲೋಡ್ ಮಾಡಲಾಗಿತ್ತು. RFQ ಕೊನೆಯ ದಿ.27.06.2017 ಹಾಗೂ 30.06.2017 ರಂದು ಟೆಂಡರ್ ತೆಗೆಯುವ ದಿನವಾಗಿತ್ತು. ಟೆಂಡರ್ ತೆಗೆದನಂತರ ಯಾರೂ ಸಹ ಭಾಗವಹಿಸುರುವುದಿಲ್ಲ (NO APPLICATION RECEIVED). ಕಾರ್ಖಾನೆಯ ತನ್ನ 560ನೇ ಮಂಡಳಿ ಸಭೆಯ ನಿರ್ದೇಶನದಂತೆ ಮೈ.ಕಾ.ಕಾ.ಯು ದಿ.21.06.2018 ರಂದು ಕರ್ನಾಟಕ ಸರ್ಕಾರದ ಇ-ಪೋರ್ಟಲ್ ನಲ್ಲಿ ಮತ್ತೆ RFQ ಅನ್ನು ಅಪ್ಲೋಡ್ ಮಾಡಿಲಾಗಿದೆ ಹಾಗೂ ಕಾಲ ಕಾಲಕ್ಕೆ ಕೊನೆಯ ದಿನಾಂಕವನ್ನು ವಿಸ್ತರಿಸಲಾಗಿದೆ. ಕಾರಣ ಮೆ// ಐ.ಟಿ.ಸಿ, ಹಾಗೂ ಮೆ// ಗ್ರಾಸಿಮ್ ಇಂಡಸ್ಟ್ರೀಸ್ ಲಿಮಿಟೆಡ್, ಇವರು ಕಾರ್ಖಾನೆಯ ಸದ್ಯದ ಯಂತ್ರೋಪಕರಣಗಳ ಸ್ಥಿತಿಗತಿ ಹಾಗೂ ಇತರೆ ವಿಷಯಗಳ ಬಗ್ಗೆ ಖುದ್ದಾಗಿ ಬಂದು ಕಾರ್ಖಾನೆ ಹಿರಿಯ ಅಧಿಕಾರಿಗಳೊಂದಿಗೆ ಚರ್ಚಿಸಲು, ಪರಿಶೀಲಿಸಲು ಬಂದಿದ್ದರು, ಈ ಕಾರ್ಖಾನೆಯವರು ಕೊನೆಯ ದಿನಾಂಕವನ್ನು ವಿಸ್ತರಿಸಲು ಕೋರಿದ್ದರು, ಹಾಗೂ ಬೇರೆ ಯಾರೂ (RFQ) ನಲ್ಲಿ ಪಾಲ್ಗೊಂಡಿರಿದ ಕಾರಣ ಕೊನೆಯ ದಿನಾಂಕವನ್ನು ವಿಸ್ತರಿಸಲಾಗಿದೆ. ಸದ್ಯಕ್ಕೆ ದಿ.12.02.2019 ರಂದು RFQ ಅಪ್ಲೋಡ್ ಮಾಡಲು ಕೊನೆಯ ದಿನಾಂಕವಾಗಿರುತ್ತದೆ. |
|---|---|---|

ಸಂಖ್ಯೆ: ಸಾಉಇ 04 ಎಲ್‌ಎಸಿ 2019

**(ಹೆಚ್.ಡಿ.ಕುಮಾರಸ್ವಾಮಿ)**
ಮುಖ್ಯಮಂತ್ರಿ

# ಅನುಬಂಧ-1

ಮೈಸೂರು ಕಾಗದ ಕಾರ್ಖಾನೆಯು ಸತತ ನಷ್ಟದ ಕಾರಣದಿಂದ ಬಿ.ಐ.ಎಫ್.ಆರ್. ಸಂಸ್ಥೆಯು ಕಂಪನಿಯನ್ನು ರೋಗಗ್ರಸ್ಥ ಕೈಗಾರಿಕೆಗಳ (ವಿಶೇಷ) ಕಾಯ್ದೆ 1985ರ ಸೆಕ್ಷನ್ 15(1) ಅಡಿಯಲ್ಲಿ , 2011ರ ಅರ್ಥಿಕ ಪರಿಶೋಧನೆಯ ಪ್ರಕಾರ ರೋಗಗ್ರಸ್ಥ ಕಾರ್ಖಾನೆ ಎಂಬುದಾಗಿ ಘೋಷಿಸಿದ್ದು 601/2012 ರ ದಾವೆಯ ಸಂಖ್ಯೆಯನ್ನು ದಿನಾಂಕ 26.03.2012ರಂದು ನೀಡಲ್ಪಟ್ಟಿರುತ್ತದೆ.

ಸರ್ಕಾರವು ಸಾಲ/ಅನುದಾನ ಮತ್ತು ಮುಂಗಡದ ರೂಪದಲ್ಲಿ ನೀಡಿರುವ ಸಹಾಯ ಧನದ ವರ್ಷವಾರು ವಿವರವು ಈ ಕೆಳಕಂಡಂತಿದೆ;

1) 2011-12 :
   (ಎ) ಕಂಪನಿಯು ಜನವರಿ 2012ರಲ್ಲಿ ಈಕ್ವಿಟಿ ಸಾಲವಾಗಿ ರೂ.5 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಬಿ) ಈಕ್ವಿಟಿಯ ಪರಿವರ್ತಿತ ಸಾಲ ರೂ.101.02 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
2) 2012-13 :
   (ಎ) ಈಕ್ವಿಟಿ ಸಾಲ ರೂ.20 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಬಿ) ಖಾತರಿ ಕಮೀಷನ್ ಪರಿವರ್ತಿತ ಈಕ್ವಿಟಿ ಸಾಲ ರೂ.2.19 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಸಿ) ಸರ್ಕಾರದ ಖಾತರಿ ಡಿಬೆಂಚರುಗಳ ಮೇಲಿನ ಸಾಲ ರೂ.50 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
3) 2013-14
   (ಎ) ಸರ್ಕಾರದ ಖಾತರಿಯ ಡಿಬೆಂಚರುಗಳ ಮೇಲಿನ ಸಾಲ ರೂ.40 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಬಿ) ಸಕ್ಕರೆ ಕಾರ್ಖಾನೆಯ ದುಡಿಮೆ ಬಂಡವಾಳ ಸಾಲ ರೂ.20 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
4) 2014-15
   (ಎ) ಸಕ್ಕರೆ ಕಾರ್ಖಾನೆ ಮತ್ತು ಕಾಗದ ಕಾರ್ಖಾನೆಯ ಮಿಲ್ಲಿನ ಕಾರ್ಯಾಚರಣೆ ದುಡಿಮೆ ಬಂಡವಾಳ ಸಾಲ ರೂ.36.44 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
5) 2015-16
   (ಎ) ಕೇಂದ್ರ ಪರಿಸರ ನಿಯಂತ್ರಣ ಮಂಡಳಿ ಮತ್ತು ರಾಷ್ಟ್ರೀಯ ಹಸಿರು ಪ್ರಾಧಿಕಾರದ ನಿರ್ದೇಶನದಂತೆ ಪರಿಸರಕ್ಕೆ ಸಂಬಂಧಿಸಿದ ಕೆಲ ಪರಿಕರಗಳನ್ನು ಜಾರಿಗೆ ತರಲು ಮೂಲ ಬಂಡವಾಳ ಸಾಲ ರೂ.5 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಬಿ) ಸಕ್ಕರೆ ಕಾರ್ಖಾನೆಯ ಕಾರ್ಯಾಚರಣೆಗಾಗಿ ದುಡಿಮೆ ಬಂಡವಾಳ ರೂ.12 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.
   (ಸಿ) ಡಿಬೆಂಚರುಗಳ ಅಸಲು ಮತ್ತು ಅದರ ಮೇಲಿನ ಬಡ್ಡಿಗಳ ಮೊತ್ತವನ್ನು ಮರುಪಾವತಿಸಲು ರೂ.17.48 ಕೋಟಿ ರೂಪಾಯಿಗಳನ್ನು ವಿವಿಧ ದಿನಾಂಕಗಳಲ್ಲಿ ಪಡೆದಿರುತ್ತದೆ.

6) 2016-17

(ಎ) ಕೇಂದ್ರ ಪರಿಸರ ನಿಯಂತ್ರಣ ಮಂಡಳಿ ಮತ್ತು ರಾಷ್ಟ್ರೀಯ ಹಸಿರು ಪ್ರಾಧಿಕಾರದ ನಿರ್ದೇಶನದಂತೆ ಪರಿಸರಕ್ಕೆ ಸಂಬಂಧಿಸಿದ ಕೆಲ ಮಾರ್ಪಾಡುಗಳನ್ನು ಮಾಡಲು ಮೂಲ ಬಂಡವಾಳ ಸಾಲ ರೂ.7..11 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.

(ಬಿ) ಡಿಬೆಂಚರುಗಳ ಅಸಲು ಮತ್ತು ಅದರ ಮೇಲಿನ ಬಡ್ಡಿಗಳ ಮೊತ್ತವನ್ನು ಮರುಪಾವತಿಸಲು ರೂ.19.38 ಕೋಟಿ ರೂಪಾಯಿಗಳನ್ನು ವಿವಿಧ ದಿನಾಂಕಗಳಲ್ಲಿ ಪಡೆದಿರುತ್ತದೆ.

7) 2017-18

(ಎ) ಡಿಬೆಂಚರುಗಳ ಅಸಲು ಮತ್ತು ಅದರ ಮೇಲಿನ ಬಡ್ಡಿಗಳ ಮೊತ್ತವನ್ನು ಮರುಪಾವತಿಸಲು ರೂ.47.15 ಕೋಟಿ ರೂಪಾಯಿಗಳನ್ನು ವಿವಿಧ ದಿನಾಂಕಗಳಲ್ಲಿ ಪಡೆದಿರುತ್ತದೆ.

(ಬಿ) ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆ / ಗುತ್ತಿಗೆ ಕಾರ್ಮಿಕರಿಗೆ ಸ್ವಯಂ ಪ್ರತ್ಯೇಕೀಕರಣ ಯೋಜನೆಯನ್ನು ಜಾರಿಗೊಳಿಸಲು ಒಂದನೇ ಹಂತದ ಮೊತ್ತ ರೂ.202.13 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ.

8) 2018-19 31.01.2019ರವರೆಗೆ

(ಎ) ಡಿಬೆಂಚರುಗಳ ಅಸಲು ಮತ್ತು ಅದರ ಮೇಲಿನ ಬಡ್ಡಿಗಳ ಮೊತ್ತವನ್ನು ಮರುಪಾವತಿಸಲು ರೂ.28.21 ಕೋಟಿ ರೂಪಾಯಿಗಳನ್ನು ವಿವಿಧ ದಿನಾಂಕಗಳಲ್ಲಿ ಪಡೆದಿರುತ್ತದೆ.

(ಬಿ) ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆ / ಗುತ್ತಿಗೆ ಕಾರ್ಮಿಕರಿಗೆ ಸ್ವಯಂ ಪ್ರತ್ಯೇಕೀಕರಣ ಯೋಜನೆಯನ್ನು ಜಾರಿಗೊಳಿಸಲು ಎರಡನೇ ಹಂತದ ಮೊತ್ತ ರೂ.143.50 ಕೋಟಿ ರೂಪಾಯಿಗಳನ್ನು ಪಡೆದಿರುತ್ತದೆ. ಕಂಪನಿಯು ರೋಗಗ್ರಸ್ಥ ಕಾರ್ಖಾನೆ ಎಂಬುದಾಗಿ ಘೋಷಣೆಯಾದ ದಿನಾಂಕದಿಂದ ಇಲ್ಲಿಯವರೆಗೆ ಯಾವುದೇ ರೀತಿಯ ರಿಯಾಯಿತಿಗಳನ್ನು ಪಡೆದಿರುವುದಿಲ್ಲ, ಆದಾಗ್ಯೂ ಕಂಪನಿಯು ಎಲ್ಲಾ ಸಾಲಗಳನ್ನು ಪಡೆದಿರುತ್ತದೆ ಅಥವಾ (ಎ) ಈಕ್ವಿಟಿ ಸಾಲಗಳು (ಬಿ) ಈಕ್ವಿಟಿಗಳ ಪರಿವರ್ತಿತ ಸಾಲಗಳು ಮತ್ತು (ಸಿ) ತ್ರೈಮಾಸಿಕಗಳಲ್ಲಿ ಪಾವತಿಸಬಹುದಾದ ಶೇಕಡ 10.25% ರ ಬಡ್ಡಿದರದ ಇನ್‌ಫ್ಯೂಷನ್ ಸಾಲಗಳ ಅರ್ಥಿಕ ಸಹಾಯವನ್ನು ಪಡೆದಿರುತ್ತದೆ.

**ಕರ್ನಾಟಕ ವಿಧಾನ ಸಭೆ**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 657

ಸದಸ್ಯರ ಹೆಸರು : ಶ್ರೀ. ಶಿವನಗೌಡ ನಾಯಕ್.ಕೆ (ದೇವದುರ್ಗ)

ಉತ್ತರಿಸುವ ದಿನಾಂಕ : 12.02.2019

ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದೇವದುರ್ಗ ತಾಲ್ಲೂಕಿನಲ್ಲಿ ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜು ಮಂಜೂರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ, ಬಂದಿದ್ದರೆ, ಕಟ್ಟಡ ನಿರ್ಮಾಣ ಕಾಮಗಾರಿ ಪ್ರಾರಂಭಗೊಂಡಿದೆಯೇ, ಇಲ್ಲದಿದ್ದಲ್ಲಿ ಕಾರಣಗಳೇನು; | ಬಂದಿದೆ.<br><br>ದೇವದುರ್ಗ ತಾಲ್ಲೂಕಿನಲ್ಲಿ 02 ಸರ್ಕಾರಿ ಪಾಲಿಟೆಕ್ನಿಕ್‌ಗಳು ಮಂಜೂರು ಮಾಡಲಾಗಿದೆ. 1) ಸರ್ಕಾರಿ ಪಾಲಿಟೆಕ್ನಿಕ್, ದೇವದುರ್ಗ, 2) ಸರ್ಕಾರಿ ಪಾಲಿಟೆಕ್ನಿಕ್, ಅರಕೇರ.<br>**ಸರ್ಕಾರಿ ಪಾಲಿಟೆಕ್ನಿಕ್, ದೇವದುರ್ಗ,**<br>ಸರ್ಕಾರಿ ಪಾಲಿಟೆಕ್ನಿಕ್, ದೇವದುರ್ಗ ಸಂಸ್ಥೆಗೆ ಆರ್.ಐ.ಡಿಎಫ್-19ರಡಿಯ ಅಂದಾಜು ಮೊತ್ತ ರೂ.326.66 ಲಕ್ಷಗಳ ಕಟ್ಟಡ ನಿರ್ಮಾಣ ಕಾಮಗಾರಿ ಅಂತಿಮ ಹಂತದಲ್ಲಿದ್ದು, ಆರ್.ಐ.ಡಿಎಫ್-20 ರಡಿಯ ಅಂದಾಜು ಮೊತ್ತ ರೂ.326.77 ಲಕ್ಷಗಳ ಕಟ್ಟಡ ನಿರ್ಮಾಣವು ಮೊದಲನೇ ಮಹಡಿಯ ಮೇಲ್ಛಾವಣಿ ಹಂತದ ಕಾಮಗಾರಿ ಪ್ರಗತಿಯಲ್ಲಿದೆ. ಆರ್.ಐ.ಡಿಎಫ್-23ರಡಿಯ ಅಂದಾಜು ಮೊತ್ತ ರೂ.146.57 ಲಕ್ಷಗಳ ನಿರ್ಮಾಣ ಕಾಮಗಾರಿಗೆ ದಿನಾಂಕ: 05/02/2019ರಂದು ನಬಾರ್ಡ್‌ನಿಂದ ಅಂತಿಮ ಮಂಜೂರಾತಿ ದೊರೆತಿದೆ. ಸದರಿ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ಕಾಮಗಾರಿಯನ್ನು ಪ್ರಾರಂಭಿಸಲು ಕ್ರಮ ಕೈಗೊಳ್ಳಲಾಗುವುದು. ಮುಖ್ಯ ಕಟ್ಟಡದೊಂದಿಗೆ ಈ ಕೆಳಕಂಡ ಕಾಮಗಾರಿಯನ್ನು ಅನುಷ್ಠಾನಗೊಳಿಸಲಾಗುತ್ತಿದೆ. |

(ರೂ.ಲಕ್ಷಗಳಲ್ಲಿ)

| ವರ್ಷ | ಕಾಮಗಾರಿ ವಿವರ | ಅಂದಾಜು ಮೊತ್ತ | ಬಿಡುಗಡೆ ಯಾದ ಅನುದಾನ | ಭೌತಿಕ ಪ್ರಗತಿ |
|---|---|---|---|---|
| 2012-13 | ಎಸ್‌ಸಿಪಿ-ಟಿಎಸ್‌ಪಿ ಹಾಸ್ಟೆಲ್ | 100.00 | 100.00 | ಕಾಮಗಾರಿ ಪೂರ್ಣಗೊಂಡಿದೆ |
| 2013-14 | | 99.60 | 99.60 | |
| 2013-14 | 07 ಹೆಚ್ಚುವರಿ ಕೊಠಡಿ | 100.00 | 100.00 | |
| 2017-18 | ಮಹಿಳಾ ಹಾಸ್ಟೆಲ್ | 200.00 | 200.00 | ಕಾಮಗಾರಿ ಪ್ರಗತಿಯಲ್ಲಿದೆ. |

**ಸರ್ಕಾರಿ ಪಾಲಿಟೆಕ್ನಿಕ್, ಅರಕೇರ**

| | | |
|---|---|---|
| | | ಈ ಪಾಲಿಟೆಕ್ನಿಕ್ ಕಾಮಗಾರಿ ಈ ಕೆಳಕಂಡ ಕಾರಣಗಳಿಂದ ಇನ್ನೂ ಪ್ರಾರಂಭಿಸಿರುವುದಿಲ್ಲ.<br>ಸರ್ಕಾರಿ ಪಾಲಿಟೆಕ್ನಿಕ್, ಅರಕೇರ ಸಂಸ್ಥೆಗೆ ಸರ್ವೆ ನಂ. 39/2 ರಲ್ಲಿ 10.00 ಎಕರೆ ಜಮೀನು ಜಿಲ್ಲಾಧಿಕಾರಿ ಆದೇಶ ಸಂಖ್ಯೆ: ಸಂ/ಕಂ/ಎಲ್ಎನ್‌ಡಿ/84/2014-15/ಭೂಮಂಜೂರು ದಿ:22-01-2015 ರಂತೆ ಮಂಜೂರುಗೊಂಡು, ಸರ್ಕಾರಿ ಪಾಲಿಟೆಕ್ನಿಕ್, ಅರಕೆರ ಸಂಸ್ಥೆಯ ಹೆಸರಿಗೆ ವರ್ಗಾವಣೆಗೊಂಡು, ಮೆ.ರೈಟ್ಸ್ ಸಂಸ್ಥೆಯು ಕಟ್ಟಡ ನಿರ್ಮಾಣ ಕಾಮಗಾರಿ ಪ್ರಾರಂಭಿಸಿದ ಸಂದರ್ಭದಲ್ಲಿ ಮಾನ್ಯ ಸ್ಥಳೀಯ ಶಾಸಕರು ಸದರಿ ಜಮೀನು ಪಟ್ಟಣದಿಂದ 3 ಕಿ.ಮೀ ದೂರದಲ್ಲಿದ್ದು, ಸಾರಿಗೆ ಸಂಪರ್ಕದ ಕೊರತೆ ಇದ್ದು, ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸುವುದು ಕಷ್ಟಸಾಧ್ಯವಾದ ಕಾರಣ ಅರಕೇರ ಮುಂಭಾಗದಲ್ಲಿ ಜುಟ್ಟಮರಡಿ ಸೀಮಾಂತರದ ಸ.ನಂ.03/* ರಲ್ಲಿ ವಿಸ್ತೀರ್ಣ 05 ಎಕರೆ ಜಮೀನನ್ನು ಮಂಜೂರು ಮಾಡಲು ಜಿಲ್ಲಾಧಿಕಾರಿಗಳು ಒಪ್ಪಿಗೆ ಸೂಚಿಸಿರುವುದರಿಂದ ಈಗಾಗಲೇ ಮಂಜೂರಾಗಿರುವ ಜಮೀನನ್ನು ಬದಲಾಯಿಸಲು ಕೋರಿರುತ್ತಾರೆ. ಈ ದಿನದವರೆಗೂ ಸರ್ಕಾರಿ ಪಾಲಿಟೆಕ್ನಿಕ್ ಹೆಸರಿಗೆ ವರ್ಗಾವಣೆಯಾಗದ ಕಾರಣ ಕಟ್ಟಡ ಕಾಮಗಾರಿ ಪ್ರಾರಂಭಗೊಂಡಿರುವುದಿಲ್ಲ.<br>ಸರ್ಕಾರಿ ಪಾಲಿಟೆಕ್ನಿಕ್, ಅರಕೇರ ಸಂಸ್ಥೆಗೆ ಸಂಬಂಧಿಸಿದ ಸದರಿ ಜಮೀನು ಬದಲಾವಣೆಯ ಪ್ರಸ್ತಾವನೆಯು ಸರ್ಕಾರದ ಹಾಗೂ ಜಿಲ್ಲಾಧಿಕಾರಿಗಳು, ರಾಯಚೂರು ಜಿಲ್ಲೆರವರ ಪರಿಶೀಲನೆಯ ಹಂತದಲ್ಲಿದೆ. |
| ಆ) | ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಕಾಲೇಜು ಕಟ್ಟಡ ನಿರ್ಮಾಣಕ್ಕೆ ಬದಲಿ ಜಾಗವನ್ನು ನೀಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ, ಬದಲಿ ಜಾಗದಲ್ಲಿ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ಒಪ್ಪಿಗೆ ನೀಡಿದೆಯೇ, ಇಲ್ಲದಿದ್ದಲ್ಲಿ ಕಾರಣಗಳೇನು. | ಬಂದಿದೆ.<br>ಬದಲಿ ಜಾಗದಲ್ಲಿ ಕಟ್ಟಡ ನಿರ್ಮಾಣ ಮಾಡಲು ಸರ್ಕಾರ ಒಪ್ಪಿಗೆ ನೀಡಿರುವುದಿಲ್ಲ.<br>ಬದಲಿ ಜಾಗವು ಅರಕೇರ ಮುಂಭಾಗದಲ್ಲಿ ಜುಟ್ಟಮರಡಿ ಸೀಮಾಂತರದ ಸ.ನಂ.03/* ರಲ್ಲಿ ವಿಸ್ತೀರ್ಣ 05 ಎಕರೆ ಜಮೀನು ಇನ್ನೂ ತಾಂತ್ರಿಕ ಶಿಕ್ಷಣ ಇಲಾಖೆಗೆ ಪೂರ್ಣವಾಗಿ ವರ್ಗಾವಣೆಗೊಂಡಿರುವುದಿಲ್ಲ. |
| ಇ) | ಬದಲಿ ಜಾಗದಲ್ಲಿ ನಿರ್ಮಾಣ ಕಾಮಗಾರಿಗೆ ಅನುಮೋದನೆ ನೀಡಲು ಯಾವುದಾದರೂ ತೊಂದರೆಗಳಿವೆಯೇ, ಇದ್ದಲ್ಲಿ ಸಂಬಂಧಿಸಿದವರಿಗೆ ಸೂಕ್ತ ನಿರ್ದೇಶನ ನೀಡಲು ಸರ್ಕಾರ ಚಿಂತಿಸುವುದೆ. | ಸದರಿ ಸಂಸ್ಥೆಗೆ ಬದಲಿ ಜಾಗದ ಜಮೀನು ಹಸ್ತಾಂತರವಾಗಿಲ್ಲದರಿಂದ, ಕಾಮಗಾರಿಯನ್ನು ಪ್ರಾರಂಭಿಸಲಾಗಿರುವುದಿಲ್ಲ. |

| ಈ) | ಬದಲಿ ಜಾಗದ ದಾಖಲೆಗಳು ಪ್ರಸ್ತಾವನೆಯೊಂದಿಗೆ ಸಲ್ಲಿಕೆಯಾಗಿದೆಯೇ; ಇಲ್ಲದಿದ್ದಲ್ಲಿ ಆಡಳಿತ ಇಲಾಖೆಯು ಕಂದಾಯ ಇಲಾಖೆಗೆ ತಿಳಿಸಿ ಸಂಬಂಧಿಸಿದ ದಾಖಲೆಗಳನ್ನು ಪಡೆಯಲು ಕ್ರಮ ಕೈಗೊಳ್ಳುವುದೇ; ಬದಲಿ ಜಾಗದಲ್ಲಿ ನಿರ್ಮಾಣ ಕಾಮಗಾರಿಯನ್ನು ಪೂರ್ಣಗೊಳಿಸಲು ಯಾವಾಗ ಸರ್ಕಾರ ಕ್ರಮಕೈಗೊಳ್ಳಲಾಗುವುದು. | ಸಲ್ಲಿಕೆಯಾಗಿಲ್ಲ.<br>ತಾಂತ್ರಿಕ ಶಿಕ್ಷಣ ಇಲಾಖೆಗೆ ಬದಲಿ ಜಾಗ ಹಸ್ತಾಂತರಗೊಂಡ ನಂತರ ಕಾಮಗಾರಿ ಪ್ರಾರಂಭಿಸಲಾಗುವುದು. |
|---|---|---|
| ಉ) | 2019-20ನೇ ಸಾಲಿನಲ್ಲಾದರೂ ಕಟ್ಟಡ ನಿರ್ಮಾಣ ಮಾಡುವ ಬಗ್ಗೆ ಸರ್ಕಾರ ಚಿಂತಿಸುವುದೇ? | ಹೌದು |

ಇಡಿ 44 ಹೆಚ್‌ಪಿಯು 2019

(ಜಿ.ಟಿ ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 214
ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)
ಉತ್ತರಿಸುವ ದಿನಾಂಕ : 12.02.2019
ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
| --- | --- | --- |
| ಅ | ಬೆಳಗಾವಿ ಜಿಲ್ಲೆ ಕಿತ್ತೂರು ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಎಲ್ಲೆಲ್ಲಿ ಸರ್ಕಾರಿ ಪದವಿ ಕಾಲೇಜುಗಳಿವೆ; ಈ ಪದವಿ ಕಾಲೇಜುಗಳಲ್ಲಿ ಯಾವ್ಯಾವ ವಿಷಯಗಳ ಕೋರ್ಸುಗಳಿವೆ; | ಬೆಳಗಾವಿ ಜಿಲ್ಲೆ ಕಿತ್ತೂರು ವಿಧಾನ ಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ<br>1) ಕಿತ್ತೂರು ಮತ್ತು<br>2) ನೇಸರಗಿಯಲ್ಲಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಿವೆ.<br>ಕಿತ್ತೂರು ಸರ್ಕಾರಿ ಪದವಿ ಕಾಲೇಜಿನಲ್ಲಿ ಬಿ.ಎ. ಬಿ.ಕಾಂ ಮತ್ತು ಬಿ.ಎಸ್ಸಿ ಕೋರ್ಸುಗಳಿವೆ<br>ನೇಸರಗಿ ಸರ್ಕಾರಿ ಪದವಿ ಕಾಲೇಜಿನಲ್ಲಿ ಬಿ.ಎ ಮತ್ತು ಬಿ.ಕಾಂ ಕೋರ್ಸುಗಳಿವೆ. |
| ಆ | ಸದರಿ ಪದವಿ ಕಾಲೇಜುಗಳು ಕಳೆದ ಎರಡು ವರ್ಷಗಳಲ್ಲಿ ಯಾವ್ಯಾವ ಹೊಸ ವಿಷಯಗಳ ಕೋರ್ಸ್ ಆರಂಭಿಸಲು ಪ್ರಸ್ತಾವನೆ ಸಲ್ಲಿಸಿದ್ದವು; ಯಾವ ಹೊಸ ಕೋರ್ಸ್‌ಗಳಿಗೆ ಅನುಮತಿ ನೀಡಲಾಗಿದೆ; | ಕಿತ್ತೂರು ಪದವಿ ಕಾಲೇಜಿನಿಂದ ಬಿ.ಎ. ಕೋರ್ಸ್‌ನಲ್ಲಿ ಐಚ್ಛಿಕ ಇಂಗ್ಲೀಷ್ ಮತ್ತು ಸಂಗೀತ ವಿಭಾಗವನ್ನು ಪ್ರಾರಂಭಿಸಲು ಅನುಮತಿ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಯಾವುದೇ ಹೊಸ ಕೋರ್ಸುಗಳಿಗೆ ಅನುಮತಿ ನೀಡಲಾಗಿಲ್ಲ<br>ನೇಸರಗಿ ಸರ್ಕಾರಿ ಪದವಿ ಕಾಲೇಜಿನಲ್ಲಿ ಬಿ.ಎ. ವಿಭಾಗದಲ್ಲಿ ಹೆಚ್.ಪಿ.ಇ ಹಾಗೂ ಹೆಚ್.ಇ.ಇ ಕಾಂಬಿನೇಷನ್‌ಗಳನ್ನು ಮತ್ತು ಬಿ.ಎಸ್ಸಿ ಕೋರ್ಸಿನಲ್ಲಿ ಪಿ.ಇ.ಎಂ ಕಾಂಬಿನೇಷನ್‌ಗಳನ್ನು ಪ್ರಾರಂಭಿಸಲು ಅನುಮತಿ ಕೋರಿ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಯಾವುದೇ ಹೊಸ ಕೋರ್ಸುಗಳಿಗೆ ಅನುಮತಿ ನೀಡಲಾಗಿಲ್ಲ. |
| ಇ | ಕಳೆದ ಮೂರು ವರ್ಷಗಳಲ್ಲಿ ಪದವಿ ಕಾಲೇಜುಗಳ ಅಭಿವೃದ್ಧಿಗಾಗಿ ಮತ್ತು ಕೊಠಡಿಗಳ ನಿರ್ಮಾಣಕ್ಕೆ ಸರ್ಕಾರದ ಯಾವ ಯಾವ ಲೆಕ್ಕಶೀರ್ಷಿಕೆಯಡಿಯಲ್ಲಿ ಅನುದಾನ ನೀಡಲಾಗಿದೆ; ಯಾವ ಯಾವ ಸಂಸ್ಥೆಗಳಿಗೆ ಕಾಮಗಾರಿ ವಹಿಸಲಾಗಿದೆ; (ವರ್ಷವಾರು ಅನುದಾನ ನೀಡಿಕೆ ಮತ್ತು ಕಾಮಗಾರಿ ವಹಿಸಿರುವ ಸಂಸ್ಥೆಗಳ ವಿವರ ನೀಡುವುದು) | ಕಿತ್ತೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2017-18ನೇ ಸಾಲಿನ ವಿಶೇಷ ಅಭಿವೃದ್ಧಿ ಯೋಜನೆಯಡಿಯಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕಾಗಿ ರೂ.100.00 ಲಕ್ಷಗಳ ಅನುದಾನ ಒದಗಿಸಿ ಕೆ.ಆರ್.ಐ.ಡಿ.ಎಲ್. ಸಂಸ್ಥೆಗೆ ಕಾಮಗಾರಿ ವಹಿಸಲಾಗಿರುತ್ತದೆ ಮತ್ತು 2018-19ನೇ ಸಾಲಿನಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕಾಗಿ ರೂ.50.00 ಲಕ್ಷಗಳು ಶೌಚಾಲಯ ನಿರ್ಮಾಣಕ್ಕಾಗಿ 15.00 ಲಕ್ಷಗಳು ಹಾಗೂ ಮಹಿಳಾ ವಿಶ್ರಾಂತಿ ಕೊಠಡಿಯನ್ನೊಳಗೊಂಡಂತೆ ಶೌಚಾಲಯ ನಿರ್ಮಾಣಕ್ಕಾಗಿ ರೂ.15.00 ಲಕ್ಷಗಳ ಅನುದಾನದಲ್ಲಿ ಈ ಕಾಮಗಾರಿಗಳನ್ನು ನಿರ್ಮಿಸುವ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ಜಿಲ್ಲಾ ನಿರ್ಮಿತಿ ಕೇಂದ್ರ, ಬೆಳಗಾವಿ. ಇವರಿಗೆ ಕಾಮಗಾರಿ ವಹಿಸಲಾಗಿರುತ್ತದೆ.<br>ನೇಸರಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2018-19ನೇ ಸಾಲಿನಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕಾಗಿ ರೂ.50.00 ಲಕ್ಷಗಳು, ಶೌಚಾಲಯ ನಿರ್ಮಾಣಕ್ಕಾಗಿ ರೂ.30.00 ಲಕ್ಷಗಳು ಹಾಗೂ ಮಹಿಳಾ ವಿಶ್ರಾಂತಿ ಕೊಠಡಿ ನಿರ್ಮಾಣಕ್ಕಾಗಿ ರೂ.15.00 ಲಕ್ಷಗಳು ಒಟ್ಟಾರೆಯಾಗಿ ರೂ.95.00 ಲಕ್ಷಗಳ ಅನುದಾನದಲ್ಲಿ ಈ ಕಾಮಗಾರಿಗಳನ್ನು ನಿರ್ಮಿಸುವ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದ್ದು, ಜಿಲ್ಲಾ ನಿರ್ಮಿತಿ ಕೇಂದ್ರ, ಬೆಳಗಾವಿ. ಇವರಿಗೆ ಕಾಮಗಾರಿ ವಹಿಸಲಾಗಿರುತ್ತದೆ. |

| | | |
|---|---|---|
| ೬ | ಈ ಕಾಮಗಾರಿಗಳ ಭೌತಿಕ ಮತ್ತು ಆರ್ಥಿಕ ಪ್ರಗತಿಯ ವಿವರ ನೀಡುವುದು. | ತಿಪಟೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2017-18ನೇ ಸಾಲಿನಲ್ಲಿ ಮಂಜೂರಾದ ರೂ.100.00 ಲಕ್ಷಗಳ ಕಾಮಗಾರಿಯೂ ಪ್ರಾರಂಭಿಕ ಹಂತದಲ್ಲಿರುತ್ತದೆ ಮತ್ತು 2018-19ನೇ ಸಾಲಿನಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕಾಗಿ ರೂ.50.00 ಲಕ್ಷಗಳು ಶೌಚಾಲಯ ನಿರ್ಮಾಣಕ್ಕಾಗಿ 15.00 ಲಕ್ಷಗಳು ಹಾಗೂ ಮಹಿಳಾ ವಿಶ್ರಾಂತಿ ಕೊಠಡಿಯನ್ನೊಳಗೊಂಡಂತೆ ಶೌಚಾಲಯ ನಿರ್ಮಾಣಕ್ಕಾಗಿ ರೂ.15.00 ಲಕ್ಷಗಳ ಕಾಮಗಾರಿಗೆ ಸಂಬಂಧಿಸಿದಂತೆ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲಾಗಿದೆ.<br><br>ಸೀಸರ್ಗಿ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿಗೆ 2018-19ನೇ ಸಾಲಿನಲ್ಲಿ ಹೆಚ್ಚುವರಿ ಕೊಠಡಿ ನಿರ್ಮಾಣಕ್ಕಾಗಿ ರೂ.50.00 ಲಕ್ಷಗಳು. ಶೌಚಾಲಯ ನಿರ್ಮಾಣಕ್ಕಾಗಿ ರೂ.30.00 ಲಕ್ಷಗಳು ಹಾಗೂ ಮಹಿಳಾ ವಿಶ್ರಾಂತಿ ಕೊಠಡಿ ನಿರ್ಮಾಣಕ್ಕಾಗಿ ರೂ.15.00 ಲಕ್ಷಗಳು ಒಟ್ಟಾರೆಯಾಗಿ ರೂ.95.00 ಲಕ್ಷಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಕ್ರಿಯಾ ಯೋಜನೆಗೆ ಅನುಮೋದನ ನೀಡಲಾಗಿದೆ.<br><br>2018-19ನೇ ಸಾಲಿನ ಮೇಲ್ಕಂಡ/ಎರಡೂ ಕಾಲೇಜುಗಳ ಕಾಮಗಾರಿಗಳಿಗೆ ಯಾವುದೇ ಅನುದಾನ ಬಿಡುಗಡೆ ಆಗಿಲ್ಲ. |

ಇಡಿ 28 ಹೆಚ್‌ಪಿಯು 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 317

ಸದಸ್ಯರ ಹೆಸರು : ಶ್ರೀ ಹರೀಶ್ ಪೂಂಜ (ಬೆಳ್ತಂಗಡಿ)

ಉತ್ತರಿಸುವ ದಿನಾಂಕ : 12.02.2019

ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಬೆಳ್ತಂಗಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಉನ್ನತ ಶಿಕ್ಷಣ ಇಲಾಖೆಗೆ ಸೇರಿದ ಎಷ್ಟು ಪ್ರಥಮ ದರ್ಜೆ ಕಾಲೇಜು, ಪಾಲಿಟೆಕ್ನಿಕ್ ಹಾಗೂ ಸರ್ಕಾರಿ ಮತ್ತು ಖಾಸಗಿ ಕಾಲೇಜುಗಳು ಇವೆ (ಎಲ್ಲಾ ಕಾಲೇಜುಗಳ ಸಂಪೂರ್ಣ ವಿವರ ನೀಡುವುದು) | ಬೆಳ್ತಂಗಡಿ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಗೆ ಸೇರಿದ 02 ಖಾಸಗಿ ಪಾಲಿಟೆಕ್ನಿಕ್‌ಗಳು ಹಾಗೂ 01 ಖಾಸಗಿ ಇಂಜಿನಿಯರಿಂಗ್ ಕಾಲೇಜು ಇರುತ್ತವೆ. ಕಾಲೇಜುಗಳ ಸಂಪೂರ್ಣ ವಿವರವನ್ನು ಈ ಕೆಳಗೆ ವಿವರಿಸಿದೆ.<br><br>**ಖಾಸಗಿ ಇಂಜಿನಿಯರಿಂಗ್ ಕಾಲೇಜುಗಳು:**<br>1. ಎಸ್.ಡಿ.ಎಂ ಇನ್ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ, ಉಜಿರೆ, ಬೆಳ್ತಂಗಡಿ ತಾ॥. ದ.ಕ ಜಿಲ್ಲೆ<br><br>**ಖಾಸಗಿ ಪಾಲಿಟೆಕ್ನಿಕ್‌ಗಳು:**<br>1. ಪ್ರಸನ್ನ ಪಾಲಿಟೆಕ್ನಿಕ್, ಲೈಲಾ, ಬೆಳ್ತಂಗಡಿ ತಾ॥. ದ.ಕ.ಜಿಲ್ಲೆ<br>2. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಪಾಲಿಟೆಕ್ನಿಕ್, ಉಜಿರೆ, ಬೆಳ್ತಂಗಡಿ ತಾ॥. ದ.ಕ.ಜಿಲ್ಲೆ.<br><br>ಕಾಲೇಜು ಶಿಕ್ಷಣ ಇಲಾಖಾ ವ್ಯಾಪ್ತಿಯ ಬೆಳ್ತಂಗಡಿ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸರ್ಕಾರಿ ಹಾಗೂ ಖಾಸಗಿ ಅನುದಾನಿತ ಕಾಲೇಜುಗಳ ವಿವರ ಕೆಳಕಂಡಂತಿದೆ.<br><br>ಸರ್ಕಾರಿ: 1. ಸ.ಪ್ರ.ದ.ಕಾಲೇಜು, ಬೆಳ್ತಂಗಡಿ; 2. ಸ.ಪ್ರ.ದ.ಕಾಲೇಜು, ಪುಂಜಾಲಕಟ್ಟೆ<br>ಖಾಸಗಿ ಅನುದಾನಿತ: 1. ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ; 2. ಸೇಕ್ರೆಡ್ ಹಾರ್ಟ್ ಕಾಲೇಜು, ಮಡಂತ್ಯಾರ್ |
| ಆ | ಶೈಕ್ಷಣಿಕ ಸುಧಾರಣೆ ಹಿತದೃಷ್ಟಿಯಿಂದ ಇನ್ನೂ ಹೆಚ್ಚಿನ ಕಾಲೇಜುಗಳನ್ನು ಮಂಜೂರು ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ? | ಇಲ್ಲ. |

ಇಡಿ 15 ಹೆಚ್‌ಪಿಯು 2019

(ಜಿ.ಟಿ ದೇವೇಗೌಡ)

ಉನ್ನತ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | ೮೦೮ |
| ಸದಸ್ಯರ ಹೆಸರು | : | ಶ್ರೀ ಹ್ಯಾರಿಸ್.ಎನ್.ಎ (ಶಾಂತಿನಗರ) |
| ಉತ್ತರಿಸುವ ದಿನಾಂಕ | : | 12.02.2019 |
| ಉತ್ತರಿಸುವ ಸಚಿವರು | : | ಮಾನ್ಯ ಉನ್ನತ ಶಿಕ್ಷಣ ಸಚಿವರು |

| ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿರುವ ಪದವಿ ಮತ್ತು ಸ್ನಾತಕೋತ್ತರ ಶಿಕ್ಷಣ ನೀಡುವ ಸರ್ಕಾರಿ ಕಾಲೇಜುಗಳ ಸುವ್ಯವಸ್ಥೆಗಾಗಿ ಮತ್ತು ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡ ಯೋಜನೆಗಳು ಮತ್ತು ಸದರಿ ಯೋಜನೆಗಳಿಗಾಗಿ ಮಂಜೂರು ಮಾಡಿದ ಅನುದಾನವೆಷ್ಟು ಮತ್ತು ಅವುಗಳ ಪ್ರಗತಿಯೇನು; (ವಿವರ ನೀಡುವುದು) | ರಾಜ್ಯದಲ್ಲಿರುವ 413 ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳ ಪೈಕಿ 2018-19ನೇ ಸಾಲಿನಲ್ಲಿ 31 ಕಾಲೇಜುಗಳಲ್ಲಿ ಹೊಸ ಕಟ್ಟಡ ನಿರ್ಮಾಣಕ್ಕಾಗಿ ರೂ.10649.05 ಲಕ್ಷಗಳು. 247 ಕಾಲೇಜುಗಳಲ್ಲಿ 1130 ಹೆಚ್ಚುವರಿ ತರಗತಿ ಕೊಠಡಿಗಳ ನಿರ್ಮಾಣಕ್ಕಾಗಿ ರೂ.28280.00 ಲಕ್ಷಗಳು. 315 ಪ್ರಯೋಗಾಲಯ ಕಟ್ಟಡ ನಿರ್ಮಾಣಕ್ಕಾಗಿ ರೂ.11025.00 ಲಕ್ಷಗಳು. 72 ಕಾಲೇಜುಗಳಲ್ಲಿ ಪ್ರತ್ಯೇಕ ಗ್ರಂಥಾಲಯ ಕಟ್ಟಡ ನಿರ್ಮಾಣಕ್ಕಾಗಿ ರೂ.4320.00 ಲಕ್ಷಗಳು. 289 ಕಾಲೇಜುಗಳಲ್ಲಿ ಶೌಚಾಲಯ ನಿರ್ಮಾಣಕ್ಕಾಗಿ ರೂ.4335.00 ಲಕ್ಷಗಳು. 258 ಕಾಲೇಜುಗಳಲ್ಲಿ ಮಹಿಳಾ ವಿಶ್ರಾಂತಿ ಗೃಹದೊಂದಿಗೆ ಶೌಚಾಲಯ ನಿರ್ಮಾಣಕ್ಕಾಗಿ ರೂ.3870.00 ಲಕ್ಷಗಳು ಮತ್ತು 62 ಕಾಲೇಜುಗಳಲ್ಲಿ ಆಡಿಟೋರಿಯಂ ನಿರ್ಮಾಣಕ್ಕಾಗಿ ರೂ. 6200.00 ಲಕ್ಷಗಳು ಒಟ್ಟಾರೆಯಾಗಿ ರೂ.68679.05 ಲಕ್ಷಗಳ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದೆ ಮತ್ತು 05 ಕಾಲೇಜುಗಳಲ್ಲಿ ವಿವಿಧ ರೀತಿಯ ರಿಪೇರಿ ಮತ್ತು ಮೂಲಭೂತ ಸೌಲಭ್ಯಕ್ಕಾಗಿ ರೂ.1603.00 ಲಕ್ಷಗಳನ್ನು ಒದಗಿಸಿದೆ.<br><br>ಪ್ರಸ್ತುತ ನಿರ್ಮಾಣ ಸಂಸ್ಥೆಯವರು ನಕ್ಷೆ ಮತ್ತು ಅಂದಾಜು ಪಟ್ಟಿ ಸಿದ್ಧಪಡಿಸುವ ಹಂತದಲ್ಲಿರುತ್ತದೆ.<br><br>ಪದವಿ ವಿಜ್ಞಾನ ಹಾಗೂ ಸ್ನಾತಕೋತ್ತರ ವಿಜ್ಞಾನ ವಿಷಯಗಳನ್ನು ಬೋಧಿಸುವ ಕಾಲೇಜುಗಳಿಗೆ ಅವಶ್ಯವಿರುವ ಪ್ರಯೋಗಾಲಯ ಉಪಕರಣಗಳು, ರಾಸಾಯನಿಕಗಳು/ಕನ್ಸುಮಬಲ್ಸ್, ಪೀಠೋಪಕರಣ/ಗ್ರಂಥಾಲಯ ಪುಸ್ತಕ ಪರಾಮರ್ಶನ ಗ್ರಂಥಗಳನ್ನು ಒದಗಿಸಿಕೊಳ್ಳಲು ರೂ.675.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. |
| ಆ | ವಿದ್ಯಾರ್ಥಿಗಳ ಪ್ರವೇಶಾತಿಯ ಕೊರತೆಯನ್ನು ಎದುರಿಸುತ್ತಿರುವ ಕಾಲೇಜುಗಳಾವುವು? (ವಿವರ ನೀಡುವುದು) ಅವುಗಳ ಅಭಿವೃದ್ಧಿ ಕುರಿತಾಗಿ ಸರ್ಕಾರದ ಮುಂದಿರುವ ಪ್ರಸ್ತಾವನೆಗಳು ಯಾವುವು. | ವಿದ್ಯಾರ್ಥಿಗಳ ಪ್ರವೇಶಾತಿಯ ಕೊರತೆಯನ್ನು ಎದುರಿಸುತ್ತಿರುವ ಕಾಲೇಜುಗಳ ಮಾಹಿತಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ.<br><br>ವಿದ್ಯಾರ್ಥಿಗಳ ಪ್ರವೇಶಾತಿಯ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಪ್ರಥಮ ಪದವಿ ತರಗತಿಗೆ ಪ್ರವೇಶ ಪಡೆಯಲಿರುವ ಎಲ್ಲಾ ವಿದ್ಯಾರ್ಥಿಗಳಿಗೆ ಲ್ಯಾಪ್‌ಟಾಪ್ ವಿತರಣೆ ಯೋಜನೆಯನ್ನು ಹಮ್ಮಿಕೊಳ್ಳಲಾಗಿದೆ ಹಾಗೂ 2018-19ನೇ ಸಾಲಿನಿಂದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪದವಿ ಮತ್ತು ಸ್ನಾತಕೋತ್ತರ ತರಗತಿಗೆ ಪ್ರವೇಶ ಪಡೆಯಲಿರುವ ಎಲ್ಲಾ ವಿದ್ಯಾರ್ಥಿನಿಯರಿಗೆ ಪೂರ್ಣ ಶುಲ್ಕ ವಿನಾಯಿತಿಯನ್ನು ನೀಡಲಾಗುತ್ತಿದೆ. ಮೇಲೆ ತಿಳಿಸಿರುವಂತೆ ಪ್ರಸ್ತುತ ಸಾಲಿನಲ್ಲಿ ರೂ.68679.05 ಲಕ್ಷಗಳ ಅಂದಾಜು ವೆಚ್ಚದಲ್ಲಿ ವಿವಿಧ ಮೂಲಭೂತ ಸೌಕರ್ಯಗಳ ಅಭಿವೃದ್ಧಿಯ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿದೆ. |
| ಇ | ವಿಶೇಷತಃ ಕರಾವಳಿ ಜಿಲ್ಲೆಗಳಲ್ಲಿನ ಸರ್ಕಾರಿ ಪದವಿ ಕಾಲೇಜುಗಳ ರೀತಿಯಲ್ಲಿ ಮಾದರಿ | ರೂಸಾ ಯೋಜನೆಯಡಿಯಲ್ಲಿ ರಾಯಚೂರು ಹಾಗೂ ಯಾದಗಿರಿ ಜಿಲ್ಲೆಗಳಲ್ಲಿ ತಲಾ ರೂ.12.00 ಕೋಟಿಗಳ ವೆಚ್ಚದಲ್ಲಿ ನೂತನ ಸರ್ಕಾರಿ |

|  |  |  |
| --- | --- | --- |
|  | ಪದವಿ ಕಾಲೇಜುಗಳನ್ನು ಸಿದ್ಧಗೊಳಿಸಿ ವಿದ್ಯಾರ್ಥಿಗಳಿಗೆ ಗುಣಮಟ್ಟದ ಪದವಿ ಮತ್ತು ಸ್ನಾತಕ ಶೈಕ್ಷಣಿಕ ವ್ಯವಸ್ಥೆಗಳನ್ನು ಒದಗಿಸಿಕೊಡುವಲ್ಲಿ ಸರ್ಕಾರದ ಕ್ರಮಗಳೇನು. | ಮಾದರಿ ಕಾಲೇಜನ್ನು ಸ್ಥಾಪನೆ ಮಾಡಲು ಕ್ರಮವಹಿಸಲಾಗಿದೆ. |
| ಈ | ಸರ್ಕಾರಿ ಕಾಲೇಜುಗಳಲ್ಲಿ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗಗಳ ಕೊರತೆಯನ್ನು ಎದುರಿಸುವ ಕಾಲೇಜುಗಳಿಗೆ ಸಕಾಲಿಕ ಸಿಬ್ಬಂದಿಗಳನ್ನು ಒದಗಿಸಿಕೊಡುವಲ್ಲಿ ಸರ್ಕಾರದ ಕ್ರಮಗಳೇನು? | ಸರ್ಕಾರಿ ಕಾಲೇಜುಗಳಲ್ಲಿ ಬೋಧಕರ ಕೊರತೆಯನ್ನು ನೀಗಿಸುವ ನಿಟ್ಟಿನಲ್ಲಿ ಸರ್ಕಾರ ಸಹಾಯಕ ಪ್ರಾಧ್ಯಾಪಕರ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಂಡಿದ್ದು, 2017-18 ಹಾಗೂ 2018-19ನೇ ಸಾಲಿನಲ್ಲಿ ಒಟ್ಟು 1937 ಅಭ್ಯರ್ಥಿಗಳನ್ನು ಸಹಾಯಕ ಪ್ರಾಧ್ಯಾಪಕರಾಗಿ ಆಯ್ಕೆ ಮಾಡಿ ನೇಮಕಾತಿ ಆದೇಶ ನೀಡಲಾಗಿದೆ.<br><br>ಪ್ರಸ್ತುತ ಖಾಲಿ ಇರುವ ಬೋಧಕರ ಮತ್ತು ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡಲು ಸಹಮತಿಯನ್ನು ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆಯನ್ನು ಕಳುಹಿಸಲಾಗಿದೆ. ಆರ್ಥಿಕ ಇಲಾಖೆಯ ಸಹಮತಿ ದೊರೆತ ನಂತರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |

ಇಡಿ 41 ಹೆಚ್‌ಪಿಯು 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

ಚುಕ್ಕೆರಹಿತ ಪ್ರಶ್ನೆ ಸಂಖ್ಯೆ [illegible]ಕ್ಕೆ ಅನುಬಂಧ

೨೦೧೮-೧೯ನೇ ಸಾಲಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜುಗಳಲ್ಲಿ ೧೦೦ ಕ್ಕಿಂತ ಕಡಿಮೆ ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆ ವಿವರ

| Sl. No. | Name of the College | Student Strength |
|---|---|---|
| 1 | Govt. First Grade College, Nonavinakere - 572 224 | 58 |
| 2 | Govt. First Grade College, Halli Mysore - 573 210, Holenarasipura Tq. | 60 |
| 3 | Govt. First Grade College, Mosalehosalli - 573 212, Hassan Tq. | 98 |
| 4 | Govt. First Grade College, Hettur - 573 123, Sakleshpura Tq. | 43 |
| 5 | Govt. First Grade College, Javanagondanahalli - 577 511, Hiriyur Tq. | 50 |
| 6 | Govt. First Grade College, Yagati - 577 040, Kadur Tq. | 88 |
| 7 | Govt. First Grade College, Napoklu, Madikeri Tq | 97 |
| 8 | Govt. First Grade College,Ron - 582 209. | 47 |
| 9 | Govt. First Grade College, Baada - 581 441, Kumta Tq | 96 |
| 10 | Govt. First Grade College, Arehalli, Belur Tq. | 46 |
| 11 | Govt. First Grade College, Terakanambi, Gundlupet Tq | 27 |
| 12 | Govt. First Grade College, Turuvanuru, Chitradurga Tq | 52 |
| 13 | Govt. First Grade College, Chitrahalli, Holalkere Tq | 86 |
| 14 | Govt. First Grade College, Turuvihal, Sindhanur Tq. | 78 |

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **654**
2. ಸದಸ್ಯರ ಹೆಸರು : ಶ್ರೀ ಜ್ಯೋತಿ ಗಣೇಶ್ ಜಿ.ಬಿ. (ತುಮಕೂರು ನಗರ)
3. ಉತ್ತರಿಸುವ ದಿನಾಂಕ : **12.02.2019**
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ತುಮಕೂರು ವಿಶೇಷ ಕೈಗಾರಿಕಾ ವಲಯ ನಿಮ್ಜ್‌ಗೆ ಯಾವ ಯಾವ ನದಿ ಮೂಲಗಳಿಂದ ನೀರನ್ನು ಕೊಡಲು ಉದ್ದೇಶಿಸಲಾಗಿದೆ ಹಾಗೂ ಮೀಸಲು ಇಡಲಾಗಿದೆ; | ತುಮಕೂರು ವಿಶೇಷ ಕೈಗಾರಿಕಾ ವಲಯ NIMZ ಈಗ CBIC (ಚೆನ್ನೈ-ಬೆಂಗಳೂರು ಇಂಡಸ್ಟ್ರಿಯಲ್ ಕಾರಿಡಾರ್) ಆಗಿದ್ದು, ಸದರಿ ಕೈಗಾರಿಕಾ ವಲಯದ 4, 5, ಮತ್ತು 6ನೇ ಹಂತದ ಮಾಸ್ಟರ್ ಪ್ಲಾನ್ ಇನ್ನೂ ತಯಾರಿಸುವ ಹಂತದಲ್ಲಿದ್ದು, M/s. Jacobs ಕಂಪನಿಯವರನ್ನು ಮಾಸ್ಟರ್ ಪ್ಲಾನ್ ತಯಾರಿಸಲು ನೇಮಿಸಲಾಗಿದೆ.<br><br>ತುಮಕೂರು ನಗರದ ತ್ಯಾಜ್ಯ ನೀರನ್ನು Secondary Treatment ಗೆ ಒಳಪಡಿಸಿ ಭೀಮಸಂದ್ರ ಕೆರೆಯಲ್ಲಿ ಶೇಖರಿಸಲಾಗಿರುವ ನೀರಿನಲ್ಲಿ 30 MLD ನೀರನ್ನು ಕೆ.ಐ.ಎ.ಡಿ.ಬಿ. ವತಿಯಿಂದ Tertiary Treatment ಮಾಡಿ, Dual Piping System ನಲ್ಲಿ ವಸಂತನರಸಾಪುರ ಕೈಗಾರಿಕಾ ಪ್ರದೇಶದ 1ರಿಂದ 6ನೇ ಹಂತದವರೆಗೆ ನೀರು ಹರಿಸುವ ಕಾಮಗಾರಿಯ ಟೆಂಡರ್ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಆ. | ಈ ಕೈಗಾರಿಕಾ ವಲಯಕ್ಕೆ ಯಾವ ಯಾವ ಮೂಲದಿಂದ ನೀರನ್ನು ಹರಿಸಲಾಗುತ್ತದೆ? (ಸಮಗ್ರ ಮಾಹಿತಿ ನೀಡುವುದು) | ಈ ಹಿಂದೆ ಇದ್ದ NIMZ (ಈಗ CBIC) ವಸಂತನರಸಾಪುರ 1ರಿಂದ 6ನೇ ಹಂತದ ಕೈಗಾರಿಕಾ ಪ್ರದೇಶವಾಗಿದ್ದು, ಜಲ ಸಂಪನ್ಮೂಲ ಇಲಾಖೆಯ ಆದೇಶ ಸಂಖ್ಯೆ: ಜಸಂಇ/ 19/ ಎನ್‌ಹೆಚ್‌ಪಿ/ 20016, ದಿನಾಂಕ: 26.06.2007ರಂತೆ ಕೈಗಾರಿಕಾ ಪ್ರದೇಶಕ್ಕೆ 0.02 ಟಿ.ಎಂ.ಸಿ. ನೀರನ್ನು ಹೇಮಾವತಿ ಯೋಜನೆಯಲ್ಲಿ ಹಂಚಿಕೆ ಮಾಡಲಾಗಿರುತ್ತದೆ.<br><br>ಹಂಚಿಕೆಯಾದ ನೀರನ್ನು ಹಂತ-ಹಂತವಾಗಿ ಕುಪ್ಪೂರು ಕೆರೆಯಲ್ಲಿ ಸಂಗ್ರಹಿಸಿಕೊಂಡು ಅಂತರಸನಹಳ್ಳಿ ಹಾಗೂ ವಸಂತನರಸಾಪುರ 1, 2 ಮತ್ತು 3ನೇ ಹಂತದ ಕೈಗಾರಿಕಾ ಪ್ರದೇಶಗಳಿಗೆ ನೀರನ್ನು ಒದಗಿಸಲಾಗುತ್ತದೆ. |

ಸಂಖ್ಯೆ: ಸಿಐ 16 ಐಎಪಿ 2019

(ಕೆ.ಜೆ. ಜಾರ್ಜ್)
ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 712

ಸದಸ್ಯರ ಹೆಸರು : ಶ್ರೀ ಹಾಲಾಡಿ ಶ್ರೀನಿವಾಸ ಶೆಟ್ಟಿ (ಕುಂದಾಪುರ)

ಉತ್ತರಿಸುವ ದಿನಾಂಕ : 12.02.2019

ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಪ್ರಶ್ನೆ | ಉತ್ತರ |
|---|---|
| ಹಲವು ವರ್ಷಗಳ ಹಿಂದೆ ನಿರ್ಮಾಣಗೊಂಡ ಸರ್ಕಾರಿ ಕಾಲೇಜುಗಳ ಕಟ್ಟಡದ ಅಂದಾಜು ವೆಚ್ಚದ 1/3 ಅಂಶ ಅನುದಾನವನ್ನು ಖಾಸಗಿ ವ್ಯಕ್ತಿಗಳು (ದಾನಿಗಳು) ನೀಡಿದಲ್ಲಿ ಸದರಿ ಕಾಲೇಜುಗಳಿಗೆ ಅವರುಗಳ ಹೆಸರು ಇಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಬಂದಿದ್ದಲ್ಲಿ, ದಾನಿಗಳು ನೀಡಿದ ಅನುದಾನದಲ್ಲಿ ನಿರ್ಮಿಸಿದ ಕಟ್ಟಡ ಅಥವಾ ಯಾವುದೇ ಅಭಿವೃದ್ಧಿ ಕಾಮಗಾರಿಗಳ ವಿಭಾಗಕ್ಕೆ ಮಾತ್ರ ದಾನಿಗಳ ಹೆಸರು ಇಡುವುದು ಸೂಕ್ತವಲ್ಲವೇ; ಈ ಬಗ್ಗೆ ಸರ್ಕಾರದ ನಿಲುವೇನು? | ಸರ್ಕಾರಿ ಆದೇಶ ಸಂಖ್ಯೆ:ಇಡಿ/51/ಯೋಸಕಾ/89, ದಿ:30.08.1989 ಆದೇಶದ ಪ್ರಕಾರ ಕಟ್ಟಡದ ಅಂದಾಜು ವೆಚ್ಚದ 1/3 ಭಾಗ ಅಥವಾ ಹೆಚ್ಚಿನ ಹಣವನ್ನು ಅಥವಾ ನಿವೇಶನ ದಾನವಾಗಿ ನೀಡಿದಲ್ಲಿ ದಾನಿಗಳು ಇಚ್ಛಿಸಿದ ಹೆಸರನ್ನು ಕಟ್ಟಡಕ್ಕೆ ನಾಮಕರಣ ಮಾಡಲು ಅವಕಾಶ ಕಲ್ಪಿಸಲಾಗಿರುತ್ತದೆ. |

ಇಡಿ 33 ಹೆಚ್‌ಪಿಯು 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 152

ಸದಸ್ಯರ ಹೆಸರು : ಶ್ರೀ ಉಮೇಶ್ ವಿಶ್ವನಾಥ್ ಕತ್ತಿ (ಹುಕ್ಕೇರಿ)

ಉತ್ತರಿಸುವ ದಿನಾಂಕ : 12.02.2019

ಉತ್ತರಿಸುವ ಸಚಿವರು : ಮಾನ್ಯ ಉನ್ನತ ಶಿಕ್ಷಣ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಪ್ರಸ್ತುತ ಸಾಲಿನಲ್ಲಿ ಹೊಸದಾಗಿ ಡಿಪ್ಲೋಮಾ ಕಾಲೇಜುಗಳನ್ನು ಮಂಜೂರು ಮಾಡಲು ಉದ್ದೇಶಿಸಲಾಗಿದೆಯೇ; ಹಾಗಿದ್ದಲ್ಲಿ ಎಷ್ಟು ಕಾಲೇಜುಗಳನ್ನು ಪ್ರಾರಂಭಿಸಲು ಉದ್ದೇಶಿಸಲಾಗಿದೆ; (ಜಿಲ್ಲಾವರು ಮಾಹಿತಿ ನೀಡುವುದು) | ನಿರ್ಧರಿಸಿಲ್ಲ. |
| ಆ | ಪ್ರಸ್ತುತ ಸಾಲಿನಲ್ಲಿ ರಾಜ್ಯದಲ್ಲಿ ಹೊಸದಾಗಿ ಡಿಪ್ಲೋಮಾ ಕಾಲೇಜುಗಳನ್ನು ಮಂಜೂರು ಮಾಡಲು ಸರ್ಕಾರಕ್ಕೆ ಪ್ರಸ್ತಾವನೆಗಳೇನಾದರು ಸ್ವೀಕೃತವಾಗಿವೆಯೇ; ಹಾಗಿದ್ದಲ್ಲಿ ಎಷ್ಟು ಡಿಪ್ಲೋಮಾ ಕಾಲೇಜುಗಳಗಾಗಿ ಬೇಡಿಕೆ ಬಂದಿವೆ; | ಹೌದು,<br>ಪ್ರಸಕ್ತ ವರ್ಷ 2018-19 ನೇ ಸಾಲಿನಲ್ಲಿ ರಾಜ್ಯ ವಿವಿಧ ಭಾಗಗಳಲ್ಲಿ ಒಟ್ಟು 28 ಪಾಲಿಟೆಕ್ನಿಕ್‌ಗಳನ್ನು ಪ್ರಾರಂಭಿಸಲು ಬೇಡಿಕೆ / ಪ್ರಸ್ತಾವನೆ ಸ್ವೀಕೃತವಾಗಿವೆ. |
| ಇ | ಡಿಪ್ಲೋಮಾ ಕಾಲೇಜು ಮಂಜೂರು ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು? | ಸರ್ಕಾರಿ ಪಾಲಿಟೆಕ್ನಿಕ್‌ಗಳನ್ನು ವಿದ್ಯಾರ್ಥಿಗಳ ಲಭ್ಯತೆ, ಕೈಗಾರಿಕೆಗಳ ಬೇಡಿಕೆ ಹಾಗೂ ಅಗತ್ಯತೆಯನುಸಾರ ಮಂಜೂರು ಮಾಡಲಾಗುತ್ತಿದೆ. |

ಇಡಿ 14 ಹೆಚ್‌ಪಿಯು 2019

(ಜಿ.ಟಿ ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 68
ಮಾನ್ಯ ಸದಸ್ಯರ ಹೆಸರು : ಶ್ರೀ ಸುರೇಶ್ ಡಿ.ಎಸ್ ( ತರೀಕೆರೆ),
ಉತ್ತರಿಸುವ ದಿನಾಂಕ : 12-02-2019
ಉತ್ತರಿಸುವ ಸಚಿವರು : ಉನ್ನತ ಶಿಕ್ಷಣ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯಾದ್ಯಂತ ವಿದ್ಯಾರ್ಥಿಗಳ (ತಾಂತ್ರಿಕ, ವಾಣಿಜ್ಯ ಹಾಗೂ ಇತರೆ ಪದವಿ) ಶೈಕ್ಷಣಿಕ ವಿದ್ಯಾಭ್ಯಾಸಕ್ಕೆ ಬ್ಯಾಂಕಿನಿಂದ ನೀಡುವ ಸಾಲದ ಬಡ್ಡಿ ದರವು ಹೆಚ್ಚಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಇಲ್ಲ |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಯಾವ ಕ್ರಮವನ್ನು ಕೈಗೊಳ್ಳಲಾಗುವುದು; | ಉದ್ಭವಿಸುವುದಿಲ್ಲ. |
| ಇ) | ವಿದ್ಯಾರ್ಥಿಗಳ ಉನ್ನತ ವಿದ್ಯಾಭ್ಯಾಸಕ್ಕಾಗಿ ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ಮಾಹಿತಿ ಒದಗಿಸುವುದು) | ವಿದ್ಯಾರ್ಥಿಗಳ ಉನ್ನತ ವಿದ್ಯಾಭ್ಯಾಸಕ್ಕಾಗಿ ತಾಂತ್ರಿಕ ಶಿಕ್ಷಣ ಇಲಾಖೆಯಡಿಯಲ್ಲಿ ಬರುವ ಇಂಜಿನಿಯರಿಂಗ್ ಮತ್ತು ಪಾಲಿಟೆಕ್ನಿಕ್‌ಗಳ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ಮತ್ತು ಪ್ರೋತ್ಸಾಹಧನ ಯೋಜನೆಯು ಜಾರಿಯಲ್ಲಿರುತ್ತದೆ. ಕುಟುಂಬದ ವಾರ್ಷಿಕ ಆದಾಯ ಎಲ್ಲಾ ಮೂಲಗಳಿಂದ ರೂ.2.50 ಲಕ್ಷದಿಂದ ರೂ.10.00 ಲಕ್ಷ ಮಿತಿಯೊಳಗಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ, ರಕ್ಷಣಾ ದಳದಲ್ಲಿ ಹಾಲಿ ಸೇವೆ ಸಲ್ಲಿಸುತ್ತಿರುವವರ ಮಕ್ಕಳಿಗೆ /ಆಶ್ರಿತರಿಗೆ ವಿದ್ಯಾರ್ಥಿ ವೇತನ, ಪಿ.ಯು.ಸಿ ಯಲ್ಲಿ ಶೇ.80 ಕ್ಕಿಂತ ಹೆಚ್ಚು ಅಂಕ ಪಡೆದು, ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಕುಟುಂಬದಿಂದ (ಬಿ.ಪಿ.ಎಲ್. ಕಾರ್ಡ್ ಹೊಂದಿರುವ) ಬಂದಂತಹ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ಶುಲ್ಕ ಉಚಿತ (ಪ್ರತಿಭಾ ಪುರಸ್ಕಾರ), ಹೆಚ್.ಐ.ವಿ/ಕುಷ್ಠರೋಗ ಪೀಡಿತ ಪೋಷಕರ ಮಕ್ಕಳಿಗೆ/ ಪೀಡಿತ ವಿದ್ಯಾರ್ಥಿಗಳಿಗೆ ಉನ್ನತ ಶಿಕ್ಷಣಕ್ಕಾಗಿ ವಿದ್ಯಾರ್ಥಿ ವೇತನ ಮತ್ತು ಉಚಿತ ಶಿಕ್ಷಣ ಯೋಜನೆಯನ್ನು ಜಾರಿಗೊಳಿಸಲಾಗಿದೆ.<br><br>ಕರ್ನಾಟಕ ಪರೀಕ್ಷಾ ಪ್ರಾಧಿಕಾರ ಮೂಲಕ ಯು.ಜಿ.ಸಿ.ಇ.ಟಿ /ಡಿ.ಸಿ.ಇ.ಟಿ/ ಪಿ.ಜಿ.ಸಿ.ಇ.ಟಿ ಕೋರ್ಸುಗಳಿಗೆ ಪ್ರವೇಶ ಪಡೆಯುವ ಅಭ್ಯರ್ಥಿಗಳಿಗೆ ಅರಿವು ಯೋಜನೆ ಅಡಿಯಲ್ಲಿ ಸಾಲ ಸೌಲಭ್ಯವನ್ನು ಕಲ್ಪಿಸಲಾಗಿದೆ.<br><br>ಕಾಲೇಜು ಶಿಕ್ಷಣ ಇಲಾಖೆ ವತಿಯಿಂದ ರಾಜ್ಯದ ಸರ್ಕಾರಿ/ಖಾಸಗಿ ಅನುದಾನಿತ ಪದವಿ ಕಾಲೇಜುಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಪ್ರತಿಭಾನ್ವಿತ ವಿದ್ಯಾರ್ಥಿನಿಯರಿಗೆ ಇಲಾಖಾ ವತಿಯಿಂದ ಸಂಚಿಹೊನ್ನಮ್ಮ, ಸರ್.ಸಿ.ವಿ.ರಾಮನ್ ವಿದ್ಯಾರ್ಥಿವೇತನವನ್ನು ವಿದ್ಯಾರ್ಥಿ/ ವಿದ್ಯಾರ್ಥಿನಿಯರಿಗೆ, ಆರ್ಥಿಕವಾಗಿ ಹಿಂದುಳಿದ ಕುಟುಂದ ಪ್ರತಿಭಾನ್ವಿತ ವಿದ್ಯಾರ್ಥಿಗಳಿಗೆ ರಾಜೀವ್‌ಗಾಂಧಿ ಸಾಲರೂಪದ ವಿದ್ಯಾರ್ಥಿವೇತನದ ಯೋಜನೆಯನ್ನು ಅನುಷ್ಠಾನಗೊಳಿಸುತ್ತಿದ್ದು, ಪದವಿ, ಸ್ನಾತಕೋತ್ತರ ಪದವಿ ತರಗತಿಯ ವಿದ್ಯಾರ್ಥಿಗಳು ಈ ಯೋಜನೆಯ ಸೌಲಭ್ಯವನ್ನು ಪಡೆದು ಉನ್ನತ ಶಿಕ್ಷಣವನ್ನು ಪಡೆಯುತ್ತಿದ್ದಾರೆ. ವಿವಿಧ ವೃತ್ತಿಪರ ಶಿಕ್ಷಣ ಕೋರ್ಸುಗಳಿಗೆ ಪ್ರವೇಶ ಪಡೆಯುವ ಪ್ರತಿಭಾವಂತ ಬಡ ವಿದ್ಯಾರ್ಥಿನಿಯರಿಗೆ ಕಿತ್ತೂರು ರಾಣಿ ಚೆನ್ನಮ್ಮ ಹೆಸರಿನಲ್ಲಿ ಬೋಧನಾ ಶುಲ್ಕವನ್ನು ಶೈಕ್ಷಣಿಕ ಸಾಲಿನವರೆಗೂ ಮರುಪಾವತಿಸಲಾಗುತ್ತಿದೆ. |

ಇಡಿ 21 ಟಿಜಿಎಲ್ 2019

(ಜಿ.ಟಿ.ದೇವೇಗೌಡ)
ಉನ್ನತ ಶಿಕ್ಷಣ ಸಚಿವರು

